# PACKAGE TOURS 2016-17

Hotel Room Accom. & South Indian Veg. Food

## Mini Andhra : 05 Days

Nov 23



Mantralaya, Srishailam, Mahanandi, Ahobila, Nava Narasimha Temples (Jwala, Pavana, Malola, Kroda, Karanja, Bhargava, Yogananda, Chatravata & Pavana)

## South India : 10 Days

Jan 28



Guruvayur, Kaladi, Trivandram, Suchindram, Kovalam, Kanyakumari, Rameshwaram, Madurai, Srirangam, Tanjore, Kumbakonam, Chidambaram, Thiruvannamalai, Navagraha Temples

## Dwarka & Jyothirlinga : 24 Days

Jan 28, Feb 25



Jaipur, Pushkar, Ajmer, Nathadwar, Kankroli, Eklingji, Udaipur, Mt. Abu, Mathrugaya, Dwarka, Bet Dwarka, Nagesham, Mul Dwarka, Porbandar, Veraval, Somnath, Dakor, Ahmedabad, Ujjain, Omkareshwar, Parli, Aurangabad, Ellora, Grishneshwar, Triyambak, Nasik, Shani Singanapur, Shirdi, Bhimashankar.

## Shaktipeetha Manali Special : 18 Days

Mar 14



Wagah Border [Indo-Pak Border], Amritsar, Vaishnavi Devi, Chamunda, Kangra, Chintapurni, Jwalamukhi, Baijnath, Kullu-Manali, Vasista, Rohtang Pass [Optional], Naina Devi, Kufri, Shimla, Chandigarh, Kurukshetra, New Delhi

## INTERNATIONAL TOURS











Dubai, Singapore, Malaysia, Thailand, Sri Lanka



# Shri Hansaa Travels

Recognised by Department of Tourism, Govt. of Karnataka


: 640, 40th Cross, 8th Block, Jayanagar, Bangalore - 70

: hansaatravels@gmail.com : hansaatravels.com

080-26643276 / 26543891 / 9341215612 / 9341415612

ವ್ಯವಸ್ಥಾಪಕ ಸಂಪಾದಕರು
*ಸ್ವಾಮಿ ಆತ್ಮಜ್ಞಾನಂದ*

ಸಂಪಾದಕರು
*ಸ್ವಾಮಿ ಜ್ಞಾನಯೋಗಾನಂದ*

ನೆರವು:
*ಆರ್. ಎಸ್. ಪೂರ್ಣಾನಂದ*
*ಡಾ. ಕೆ. ಎಲ್. ಪ್ರಸನ್ನಾಕ್ಷೀ*
*ಡಾ. ಎಚ್. ಪಾಂಡುರಂಗ ವಿಠಲ*

ಅಕ್ಷರ ಜೋಡಣೆ
*ಶ್ರೀರಾಮಕೃಷ್ಣ ಆಶ್ರಮ, ಮೈಸೂರು*
ಮುದ್ರಣ
*ಮಯೂರ್ ಗ್ರಾಫಿಕ್ಸ್, ಬೆಂಗಳೂರು*

E-mail:
mysuru.vivekaprabha@rkmm.org
Website: www.vivekaprabha.net
ಫೋನ್ : 9481533505

ಮುಖಪುಟ:
ಶ್ರೀಮಾತಾ ಮಂದಿರ, ಬೇಲೂರು ಮಠ

ಈ ಪತ್ರಿಕೆಯ ಧ್ಯೇಯ

'ನಾವು ಪತ್ರಿಕೆಯ ಮೂಲಕ ಸಕಲ ವಿಚಾರಗಳಲ್ಲಿಯೂ ಜೀವನಪೋಷಕ ಆದರ್ಶಗಳನ್ನು ಜನರಿಗೆ ಕೊಡಬೇಕು... ವೇದವೇದಾಂತಗಳ ಉಚ್ಚ ಭಾವನೆಗಳನ್ನು ಸುಲಭವಾದ ಮಾತುಗಳಲ್ಲಿ ಜನರಿಗೆ ತಿಳಿಸಿಕೊಡಬೇಕು.'

– ಸ್ವಾಮಿ ವಿವೇಕಾನಂದ

ಚಂದಾ ವಿವರ

ಬಿಡಿ ಪ್ರತಿ : ₹ 14
ವಾರ್ಷಿಕ : ₹ 140
ಮೂರು ವರ್ಷ : ₹ 375
ಆಜೀವ (25 ವರ್ಷ) : ₹ 3,000
ಪೋಷಕರು : ₹ 5,000 ಅಥವಾ ಹೆಚ್ಚು.
ವಿದೇಶಗಳಿಗೆ : (ಏರ್‌ಮೇಲ್)
ವಾರ್ಷಿಕ : $ 20; ಮೂರು ವರ್ಷ : $ 60
ಆಜೀವ (25ವರ್ಷ) : $ 300
ಪೋಷಕರು : $ 600 ಅಥವಾ ಹೆಚ್ಚು.

ಚಂದಾ ಹಣವನ್ನು (Sri Ramakrishna Ashrama, Viveka Prabha A/c ಹೆಸರಿಗೆ) ಎಂ.ಓ. ಅಥವಾ ಡಿ.ಡಿ. ಮೂಲಕ ಮಾತ್ರ ಕಳುಹಿಸಬೇಕು. ಚೆಕ್‌ಗಳನ್ನು ಸ್ವೀಕರಿಸಲಾಗುವುದಿಲ್ಲ. ಆಜೀವ ಚಂದಾದಾರರು ಮತ್ತು ಪೋಷಕರಿಗೆ ಮೈಸೂರು ಆಶ್ರಮದ ಪುಸ್ತಕಗಳ ಮೇಲೆ ಮೈಸೂರು ಆಶ್ರಮದ ಮೂಲಕ ನೇರವಾಗಿ ಕೊಂಡಾಗ ಮಾತ್ರ ಶೇ. 20 ರಷ್ಟು ರಿಯಾಯಿತಿ ಕೊಡಲಾಗುವುದು. ಪೋಷಕ ಸಹಾಯಧನಕ್ಕೆ 80-G ಅಧಿನಿಯಮದ ಪ್ರಕಾರ ವರಮಾನ ತೆರಿಗೆ ವಿನಾಯಿತಿ ಇದೆ. ಪೋಷಕರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು.





# ವಿವೇಕ ಪ್ರಭ

 ಪರಿವಿಡಿ 









## ಪ್ರಾರ್ಥನೆ

# ಶ್ರೀರಾಮಕೃಷ್ಣ ಸುಪ್ರಭಾತಮ್ - ೨

**ನಾನಾಜನಾಭಿನುತ ವೈಭವಲೋಕಮಾತೃ-**
**ಧ್ಯಾನಾಭಿಲೀನನಿಜಮಾನಸಪುಣ್ಯಮೂರ್ತೇ ।**
**ಮಾನಾತಿರಿಕ್ತಮಹಿಮಾನ್ವಿತಮಾನ್ಯಕೀರ್ತೇ**
**ಶ್ರೀರಾಮಕೃಷ್ಣಭಗವನ್ ತವ ಸುಪ್ರಭಾತಮ್ ॥ ೪ ॥**

ಅನೇಕ ಜನರಿಂದ ಸ್ತೋತ್ರಮಾಡಲ್ಪಡುವ ವೈಭವವುಳ್ಳವರೆ, ಕಾಳೀಮಾತೆಯ ಧ್ಯಾನದಲ್ಲಿ ಮುಳುಗಿದ ಮನಸ್ಸನ್ನು ಹೊಂದಿದ ಪುಣ್ಯಶರೀರವುಳ್ಳವರೆ, ಮಾನ-ಅಪಮಾನಾದಿ ದ್ವಂದ್ವಗಳನ್ನು ಮೀರಿದ ಮಹಿಮೆಯಿಂದ ಪೂಜಿತವಾದ ಕೀರ್ತಿಯುಳ್ಳ ಶ್ರೀರಾಮಕೃಷ್ಣರೆ, ನಿಮಗೆಶುಭೋದಯವಾಗಲಿ.



**ವೇದಾಂತತತ್ತ್ವಕಥನೈಃ ಭವಶೋಕಭಾಜಾಮ್ ।**
**ಸ್ವೇದಾಪನೋದನನಿದಾನವಿರಕ್ತಯೋಗಿನ್ ।**
**ಮೋದಾವಹೋಕ್ತಿಮಕರಂದರಸಪ್ರದಾಯಿನ್**
**ಶ್ರೀರಾಮಕೃಷ್ಣಭಗವನ್ ತವ ಸುಪ್ರಭಾತಮ್ ॥ ೫ ॥**

ಸಂಸಾರದ ದುಃಖಕ್ಕೆ ಒಳಗಾಗಿ ನೋಯುತ್ತಿರುವವರಿಗೆ ವೇದಾಂತ ತತ್ತ್ವಗಳನ್ನು ಸರಳವಾದ ರೀತಿಯಲ್ಲಿ ಬೋಧಿಸುತ್ತಾ, ಅವರ ಆಯಾಸವನ್ನು ಹೋಗಲಾಡಿಸಿದ ವೈರಾಗ್ಯ ಶಿಖಾಮಣಿಯೆ, ಯೋಗಿಯೆ, ಸಂತೋಷವನ್ನುಂಟುಮಾಡುವ ಮಾತೆಂಬ ಮಧು (ಜೇನಿನ) ರಸವನ್ನು ಕರುಣಿಸಿದ ಶ್ರೀರಾಮಕೃಷ್ಣರೆ, ನಿಮಗೆ ಶುಭೋದಯವಾಗಲಿ.

**ಅಕ್ಷಾಮಕಾಂತಿಪರಿವೇಷಪರೀತಮೂರ್ತೇ**
**ಶಿಕ್ಷಾವಿಚಕ್ಷಣ ವಿಶಿಷ್ಟಗುಣಾಂಬುರಾಶೇ ।**
**ವೀಕ್ಷಾವಿಶೇಷಿತಭವಾರ್ಣವ ಭವ್ಯರಾಶೇ**
**ಶ್ರೀರಾಮಕೃಷ್ಣಭಗವನ್ ತವ ಸುಪ್ರಭಾತಮ್ ॥ ೬ ॥**

ಕುಂದದ ಕಾಂತಿಯ ಮಂಡಲದಿಂದ ಸುತ್ತುಗಟ್ಟಿರುವ ಶರೀರವುಳ್ಳವರೆ, ತಿಳಿವಳಿಕೆ ನೀಡುವಲ್ಲಿ ವಿಶೇಷ ನೈಪುಣ್ಯವುಳ್ಳವರೆ, ವಿಶೇಷವಾದ ಗುಣಗಳ ಸಾಗರವೆ, ಕೃಪಾದೃಷ್ಟಿಯಿಂದ ನೋಡುವುದರ ಮೂಲಕ ಭವಸಾಗರವನ್ನು ಭವ್ಯವಾಗಿ ಮಾಡಿರುವ ಶ್ರೀ ರಾಮಕೃಷ್ಣರೆ, ನಿಮಗೆ ಶುಭೋದಯವಾಗಲಿ.

**- ಸ್ವಾಮಿ ಜ್ಞಾನಾನಂದ ಸರಸ್ವತೀ**

## ಸೂಕ್ತಿಪ್ರಭ

# ಶ್ರೀಮಾತೆಯವರ ಉಪದೇಶಗಳು

❁ ಯಾವಾಗಲೂ ಯಾರೂ ಸುಖವಾಗಿರಲಾರರು. ಅದೇ ರೀತಿ ಯಾರಿಗೂ ಜನ್ಮವಿಡೀ ದುಃಖವುಂಟಾಗದು. ಕರ್ಮಕ್ಕೆ ಅನುಸಾರವಾಗಿ ಫಲ; ಅಂತೆಯೇ ಅವನಿಗೆ ಅವಕಾಶ ಲಭಿಸುವುದು.

❁ ಭಗವಂತನ ಇಚ್ಛೆಯಿಲ್ಲದೆ ಯಾವುದೂ ಸಾಧ್ಯವಾಗದು; ಒಂದು ಹುಲ್ಲುಕಡ್ಡಿಯೂ ಅಲುಗಾಡದು. ಜೀವಕ್ಕೆ ಸುಸಂದರ್ಭ ಬಂದಾಗ ಧ್ಯಾನ ಮಾಡುವ ಅವಕಾಶ ಒದಗುವುದು. ಭಗವಂತನ ಇಚ್ಛೆ ಯಾವುದೋ ಅದನ್ನು ತಕ್ಕ ಸಮಯದಲ್ಲಿ ಅವನು ಮನುಷ್ಯನ ಕರ್ಮದ ಮೂಲಕ ಪ್ರಕಟಗೊಳಿಸುತ್ತಾನೆ.

❁ ಯಾರು ಶ್ರೀರಾಮಕೃಷ್ಣರ ಮೇಲೆ ತಮ್ಮೆಲ್ಲ ಭಾರವನ್ನೂ ಒಪ್ಪಿಸಿಬಿಡುವರೋ, ಅವರ ಎಲ್ಲವನ್ನೂ ಅವರೇ ನೋಡಿಕೊಳ್ಳುವರು. ಎಲ್ಲವನ್ನೂ ಸಹಿಸಿಕೊಳ್ಳಬೇಕು. ಏಕೆಂದರೆ, ಕರ್ಮಕ್ಕೆ ತಕ್ಕಂತೆ ಎಲ್ಲವೂ ನಿರ್ಧರಿಸಲ್ಪಡುವುದು. ಅಂತೆಯೇ ಕರ್ಮದ ಮೂಲಕವೇ ಕರ್ಮ ಕತ್ತರಿಸಲ್ಪಡುವುದು.

❁ ಶಿಷ್ಯ : ಕೃಪೆ ಹೊಂದಲು ಪಾತ್ರರು, ಅಪಾತ್ರರು ಎಂದಿದೆಯೆ? ಎಲ್ಲರ ಮೇಲೂ ಕೃಪೆ ಸಮಾನವಾಗಿ ಉಂಟಾಗದೆ?

ಶ್ರೀಮಾತೆ: ನದಿಯ ದಂಡೆಯ ಮೇಲೆ ಕುಳಿತು ಭಗವಂತನನ್ನು ಪ್ರಾರ್ಥಿಸಬೇಕು. ತಕ್ಕ ಸಮಯ ಬಂದಾಗ ಅವನು ನದಿ ದಾಟಿಸುತ್ತಾನೆ.

❁ ಭಗವಂತನೇ ನಮ್ಮ ತಂದೆ, ತಾಯಿ ಆಗಿದ್ದಾನೆ. ಅವನೇ ತಾಯಿ, ತಂದೆಯರ ರೂಪದಲ್ಲಿ ಪಾಲನೆ ಮಾಡುತ್ತಿದ್ದಾನೆ. ಅವನೇ ನಮ್ಮನ್ನು ನೋಡಿಕೊಳ್ಳುತ್ತಾನೆ.

❁ ಶಿಷ್ಯ : ವೇದಾಂತವಾದಿಗಳಾದ ಸಾಧುಗಳು ನಿರ್ವಾಣ ಹೊಂದುವರೆ?

ಶ್ರೀಮಾತೆ: ಹೌದು, ಹೊಂದುವರು. ಮಾಯೆಯನ್ನು ಕತ್ತರಿಸುತ್ತ ನಿರ್ವಾಣವುಂಟಾಗುವುದು - ಅಂದರೆ ಅವರು ಭಗವಂತನಲ್ಲಿ ಒಂದಾಗುವರು. ಆಸೆಗಳ ಪರಿಣಾಮವೇ ದೇಹ. ಆಸೆ ಸ್ವಲ್ಪವೂ ಇರದಿದ್ದರೆ ದೇಹ ಉಳಿಯದು. ಒಂದೇ ಸಲ ಆಸೆ ಇಲ್ಲವಾದರೆ ಎಲ್ಲವೂ ಮುಗಿದಂತೆ.

**ಶ್ರೀಶಾರದಾದೇವಿ ವಚನವೇದದಿಂದ**




# ರಾಮಕೃಷ್ಣ ಅದ್ವೈತ ಆಶ್ರಮ, ವಾರಣಾಸಿ

(ರಾಮಕೃಷ್ಣ ಮಠ, ಹೌರಾ ಜಿಲ್ಲೆಯ ಬೇಲೂರು ಮಠದ ಶಾಖಾ ಕೇಂದ್ರ)
ಪೊ: ಡಿ. 45/6. ಶ್ರೀರಾಮಕೃಷ್ಣ ರೋಡ್, ಲಕ್ಸ, ವಾರಣಾಸಿ - 221 010
ಫೋನ್: (0542) 2393975. E-Mail: Varanasi.advita@rkmm.org

## ಒಂದು ವಿನಮ್ರ ವಿನಂತಿ

**ಪ್ರಿಯ ಭಕ್ತರೆ,**

ವಾರಣಾಸಿಯ ಅದ್ವೈತ ಆಶ್ರಮವು, ಜಗದ್ವಿಖ್ಯಾತ ರಾಮಕೃಷ್ಣ ಮಹಾಸಂಘದ ಒಂದು ಶಾಖಾಕೇಂದ್ರ. ಪವಿತ್ರ ತೀರ್ಥಕ್ಷೇತ್ರವಾದ ವಾರಣಾಸಿಯಲ್ಲಿ ಶಿವಾಂಶ ಸಂಭೂತರೂ ಶ್ರೀರಾಮಕೃಷ್ಣರ ಧೀಮಂತ ಶಿಷ್ಯರೂ ಆದ ಯುಗಾಚಾರ್ಯ ಸ್ವಾಮಿ ವಿವೇಕಾನಂದರ ಆದೇಶದ ಮೇರೆಗೆ, ಅವರ ಸೋದರ ಸಂನ್ಯಾಸಿ ಸ್ವಾಮಿ ಶಿವಾನಂದಜಿ ಮಹಾರಾಜರು ಈ ಮಠವನ್ನು ಜುಲೈ ತಿಂಗಳು 4ನೇ ತಾರೀಖು 1902ರಲ್ಲಿ ಪ್ರಾರಂಭಿಸಿದರು. ಭಗವಾನ್ ಶ್ರೀರಾಮಕೃಷ್ಣರು, ಶ್ರೀಮಾತೆ ಶಾರದಾದೇವಿಯವರು ಮತ್ತು ಸ್ವಾಮಿ ವಿವೇಕಾನಂದರು ಬೋಧಿಸಿದ ಅದ್ವೈತ ವೇದಾಂತದ ಪ್ರಚಾರ ಈ ಮಠದ ಮುಖ್ಯ ಧ್ಯೇಯವಾಗಿದೆ.

ಈ ಆಶ್ರಮವು ಶ್ರೀಮಾತೆಯವರ ಪಾದಧೂಳಿಯಿಂದ ಪವಿತ್ರವಾಗಿದೆ. ಸ್ವಾಮಿ ವಿವೇಕಾನಂದರು, ಬ್ರಹ್ಮಾನಂದರು, ಶಾರದಾನಂದರು ಮತ್ತು ಇತರ ಸೋದರ ಸಂನ್ಯಾಸಿಗಳು ಇಲ್ಲಿಗೆ ಆಗಮಿಸಿ, ತೀರ್ಥಕ್ಷೇತ್ರದಲ್ಲಿರುವ ಈ ಆಶ್ರಮದ ಪವಿತ್ರತೆಯನ್ನು ಇಮ್ಮಡಿಗೊಳಿಸಿದ್ದಾರೆ. ರಾಮಕೃಷ್ಣ ಸಂಘದ ಮೊಟ್ಟ ಮೊದಲ ದೇವಾಲಯವೆನ್ನುವ ಕೀರ್ತಿ ಈ ಮಠಕ್ಕೆ ಸಲ್ಲುತ್ತದೆ. ಇಲ್ಲಿ ಪ್ರತಿಷ್ಠೆಗೊಂಡಿರುವ ಶ್ರೀರಾಮಕೃಷ್ಣರ ಸುಂದರ ಮೂರ್ತಿಯು, ಅವರ ಪ್ರಥಮ ಅಮೃತ ಶಿಲೆಯ ಮೂರ್ತಿಯಾಗಿದೆ.

ಆಶ್ರಮದಲ್ಲಿ ಶ್ರೀರಾಮಕೃಷ್ಣರಿಗೆ ನಿತ್ಯಪೂಜೆ ಮತ್ತು ಅನ್ನಭೋಗದ ವ್ಯವಸ್ಥೆ ಇದ್ದು, ಇಲ್ಲಿ ಎಲ್ಲ ಹಬ್ಬ ಹರಿದಿನಗಳನ್ನೂ ಆಚರಿಸಲಾಗುತ್ತಿದೆ. ಪ್ರತಿದಿನ ಸಂಜೆ ಪ್ರವಚನಗಳು ಇಲ್ಲಿ ನಡೆಯುತ್ತಿವೆ. ಇಲ್ಲಿ ಒಂದು ಗ್ರಂಥಾಲಯವೂ ಇದ್ದು, ಇದರಲ್ಲಿ 17,000 ಪುಸ್ತಕಗಳನ್ನು ಸಂಗ್ರಹಿಸಲಾಗಿದೆ. ಅಗತ್ಯವಿದ್ದಾಗ ಆಶ್ರಮವು ದೀನ-ದರಿದ್ರರ ಸೇವೆಯಲ್ಲಿಯೂ ನಿರತವಾಗುತ್ತಿದೆ. ಕಾಶೀಕ್ಷೇತ್ರದಲ್ಲಿ ವಾಸಿಸಲು ಬಯಸುವ ನಿವೃತ್ತ ಸಾಧುಗಳೂ ಈ ಆಶ್ರಮದಲ್ಲಿ ವಾಸಿಸುತ್ತಿದ್ದಾರೆ. ಈ ಮೇಧಾವಿ ಸಾಧುಗಳು ಹೊರಗೆ ಹೋಗಿ ಅದ್ವೈತ ತತ್ತ್ವಗಳ ಪ್ರಚಾರಲ್ಲಿಯೂ ತೊಡಗುತ್ತಾರೆ.

ಈ ಆಶ್ರಮದ ಮುಖ್ಯ ಕಟ್ಟಡ 125 ವರ್ಷಗಳಿಗಿಂತಲೂ ಹಳೆಯದು. ಇದಕ್ಕೆ ಸೇರಿಕೊಂಡ ಇತರ ಕಟ್ಟಡಗಳೂ ಸಹ 85 ವರ್ಷಗಳಷ್ಟು ಹಿಂದೆ ನಿರ್ಮಾಣಗೊಂಡವು. ಈ ಹಳೆಯ ಮಂದಿರ ಮತ್ತು ಇತರ ಕಟ್ಟಡಗಳಿಗೆ ಅತಿ ಶೀಘ್ರವಾಗಿ ನವೀಕರಣದ ಅಗತ್ಯವಿದೆ. ಗ್ರಂಥಾಲಯದಲ್ಲಿರುವ ಅತ್ಯಂತ ಹಳೆಯ ಪುಸ್ತಕಗಳನ್ನು ಬದಲಾಯಿಸಬೇಕಾದ ಅಗತ್ಯವೂ ಇದೆ. ಆಶ್ರಮದ ಹಲವು ಚಟುವಟಿಕೆಗಳಿಗೆ ಅನಿವಾರ್ಯವಾಗಿ ನಿರಂತರ ವಿದ್ಯುತ್ತಿನ ಪೂರೈಕೆಯ ಅಗತ್ಯವಿದೆ. ಇದರ ನಿರ್ವಹಣೆಗೆ ಸುಲಭವಾದ ಮತ್ತು ಉಪಯುಕ್ತವಾದ 30 KW ಸೋಲಾರ್ ಪವರ್ ಉತ್ಪಾದಕ ಯಂತ್ರವನ್ನು ಆಶ್ರಮದ ಕಟ್ಟಡದ ಮೇಲ್ಭಾಗದಲ್ಲಿ ಸ್ಥಾಪಿಸಲು ಕೂಡ ಯೋಜಿಸಲಾಗಿದೆ.

ಈ ಎಲ್ಲ ಕಾರ್ಯಗಳಿಗೆ ತಗಲುವ ವೆಚ್ಚದ ಅಂದಾಜು ಪಟ್ಟಿ ಈ ರೀತಿ ಇದೆ:

| | | |
|---|---|---|
| 1. | ವಿದ್ಯುತ್ ಚಾಲಿತ ಲಿಫ್ಟ್ | ರೂ. 15,00,000.00 |
| 2. | ಹೊಸಪುಸ್ತಕಗಳ ಖರೀದಿ ಮತ್ತು ಪೀಠೋಪಕರಣಗಳು | ರೂ. 10,00,000.00 |
| 3. | ದೇವಾಲಯ ಮತ್ತು ಕಟ್ಟಡಗಳ ಪುನರ್ನಿರ್ಮಾಣ ಮತ್ತು ನವೀಕರಣ | ರೂ. 25,00,000.00 |
| 4. | 30 KW ಸೋಲಾರ್ ಎಲೆಕ್ಟ್ರಿಸಿಟಿ ಜನರೇಟಿಂಗ್ ಸಿಸ್ಟಮ್ | ರೂ. 30,00,000.00 |
| 5. | ನಿವೃತ್ತ ಸಾಧುಗಳ ಪೋಷಣೆಗೆ ದತ್ತಿ | ರೂ. 50,00,000.00 |
| 6. | ಆಶ್ರಮದ ನಿರ್ವಹಣೆಗೆ ದತ್ತಿ | ರೂ. 30,00,000.00 |
| | **ಒಟ್ಟು** | **ರೂ. 1,60,00,000.00** |

ಈ ಪುಣ್ಯಕಾರ್ಯದಲ್ಲಿ ಭಕ್ತರು, ಹಿತೈಷಿ ಸಾರ್ವಜನಿಕರು, ಲೋಕೋಪಕಾರಿ ಸಂಸ್ಥೆಗಳು ಉದಾರವಾಗಿ ಧನಸಹಾಯ ಮಾಡಬೇಕೆಂದು ಕಳಕಳಿಯಿಂದ ಪ್ರಾರ್ಥಿಸುತ್ತೇವೆ.

ಭಗವತ್ಸೇವೆಯಲ್ಲಿ ನಿಮ್ಮವ
**ಸ್ವಾಮಿ ವಿಶ್ವಾತ್ಮಾನಂದ,**
ಅಧ್ಯಕ್ಷ
ಫೋನ್: 8017229781

ರಾಮಕೃಷ್ಣ ಮಠ ಮತ್ತು ರಾಮಕೃಷ್ಣ ಮಿಷನ್ನಿಗೆ ನೀಡುವ ದೇಣಿಗೆಯ ಮೇಲೆ ಆದಾಯ ತೆರಿಗೆ ಕಾಯಿದೆ 1961 ನಿಯಮ 80ಜಿ ಮೇರೆಗೆ, ಆದಾಯ ತೆರಿಗೆ ರಿಯಾಯಿತಿ ಇರುತ್ತದೆ.

ಚೆಕ್‌ಗಳು ಮತ್ತು ಡ್ರಾಫ್ಟ್‌ಗಳನ್ನು "Ramakrishna Advaita Ashrama, Varanasi" ಎಂದು ನಮೂದಿಸಿ ಕಳುಹಿಸಲು ಕೋರಿದೆ. ಇದರಲ್ಲಿ PAN ನಂಬರ್‌ನ್ನು ತಪ್ಪದೆ ನಮೂದಿಸಬೇಕು.

ನೆಟ್ ಬ್ಯಾಂಕಿಂಗ್ ಮೂಲಕ ಹಣವನ್ನು ನೇರ ವರ್ಗಾವಣೆ ಮಾಡಲು ಅಗತ್ಯವಾದ ವಿವರಗಳು:

1. ಇಂಡಿಯನ್ ಬ್ಯಾಂಕ್, ಗುದೋಲಿಯ ಮಿಸ್ಸರ್‌ಪೋಖ, ಗುದೋಲಿಯ, ವಾರಣಾಸಿ.
   Account No: 449844434, IFSC Code: IDIB000G035
2. ಸ್ಟೇಟ್ ಬ್ಯಾಂಕ್ ಆಫ್ ಇಂಡಿಯ, ಜಂಗಮವಾಡಿ, ವಾರಣಾಸಿ, ಗುದೋಲಿಯ.
   Account No: 10528315009, IFSC Code: SBI N0001190

ಮೇಲಿನಂತೆ ಹಣ ಸಂದಾಯ ಮಾಡುವವರು ತಪ್ಪದೆ ಇ-ಮೇಲ್ ಅಥವ ಪತ್ರದ ಮೂಲಕ ವಿವರಗಳನ್ನು PAN ಕಾರ್ಡ್ ಸಂಖ್ಯೆಯೊಂದಿಗೆ ತಿಳಿಸಿದರೆ, ಹಣ ಸಂದ ರಸೀತಿಯನ್ನು ಕಳುಹಿಸಲಾಗುವುದು.



ಸಂಪಾದಕೀಯ

# ಇರುವಿಕೆ ಮತ್ತು ತೋರುವಿಕೆ

ಪ್ರಪಂಚದಲ್ಲಿ ಹೊಸ ಪ್ರವೃತ್ತಿಯೊಂದು ವ್ಯಾಪಕಗೊಳ್ಳುತ್ತಿದೆ. 'ನೀನು ಹೇಗೇ ಇರು, ಎಂತಾದರೂ ಇರು; ಸಮರ್ಪಕವಾಗಿ ತೋರಿಸಿಕೋ' ಎಂಬುದೇ ಆ ಪ್ರವೃತ್ತಿ. ಇದಕ್ಕೆ ದೇಶ, ಸಮಾಜ, ಸಂಸ್ಕೃತಿಗಳ ಸೀಮೆಯಿಲ್ಲ. ಜಪಾನಿನಿಂದ ಬಂದವನೊಬ್ಬ ಭಾರತದ ಜನಜೀವನವನ್ನು ಕಂಡು ಅಚ್ಚರಿಪಟ್ಟರೂ, ಇಲ್ಲಿನವರ ಮುಂದೆ ತನ್ನತನವನ್ನು 'ತೋರಿಸಿ'ಕೊಳ್ಳಲು ಯತ್ನಿಸುತ್ತಾನೆ. ಅಧ್ಯಾಪಕನು ತರಗತಿಯಲ್ಲಿ ಪಾಠ ಮಾಡಲು ನಿಂತಾಗ ತನ್ನ ಅರಿವು, ಸಾಮರ್ಥ್ಯ, ಆದರ್ಶಗಳನ್ನು ವಿದ್ಯಾರ್ಥಿಗಳ ಮುಂದೆ ಸಮರ್ಪಕವಾಗಿ ಪ್ರಕಟಗೊಳಿಸಲು ಪ್ರಯತ್ನ ಮಾಡುತ್ತಾನೆ. ಗ್ರಾಹಕ ಬಂದಾಗ ಅಂಗಡಿಯವನು ತನ್ನ ಬಳಿ ಇರುವುದೆಲ್ಲವೂ ಅತ್ಯುತ್ತಮ ವಸ್ತುಗಳೆಂದು ಮನವರಿಕೆ ಮಾಡಿಕೊಡಲು ಹರಸಾಹಸ ಮಾಡುತ್ತಾನೆ. ಇನ್ನು ಕಲಾವಿದರು, ವೈದ್ಯರು, ವಕೀಲರು, ಕಾರ್ಪೋರೇಟ್ ಜಗತ್ತಿನ ಮಂದಿ – ಇವರೆಲ್ಲ ತಮ್ಮ ತಮ್ಮ ಪ್ರತಿಷ್ಠೆಯನ್ನು ಸಮರ್ಥವಾಗಿ ಬಿಂಬಿಸಲು ಶಕ್ತಿಮೀರಿ ಯತ್ನಿಸುತ್ತಾರೆ. ಕೇವಲ ಮಾರ್ಕೆಟಿಂಗ್ ಮಾತ್ರವೇ ಅವರ ಉದ್ದೇಶವಾಗಿರಬೇಕಿಲ್ಲ; ಇದೇ ನಿಜವಾದ ಜೀವನಕ್ರಮವೆನಿಸಿದೆ.

### ಅಭಿವ್ಯಕ್ತಿ ಮತ್ತು ಅಭಿನಯ

ತನ್ನೊಳಗಿರುವ ಶಕ್ತಿ, ಸಾಮರ್ಥ್ಯ, ಪ್ರತಿಭೆಯನ್ನು ಪ್ರಕಟಗೊಳಿಸುವುದೇ 'ಅಭಿವ್ಯಕ್ತಿ'. ತನ್ನಲ್ಲಿಲ್ಲದ್ದನ್ನು ಇರುವಂತೆ ತೋರಿಸುವುದೇ 'ಅಭಿನಯ'. ಇವೆರಡೂ ಸಂಪೂರ್ಣ ಭಿನ್ನವಾದ ಕಾರ್ಯಗಳು. ಮೊದಲನೆಯದು, ಪ್ರತಿಯೊಬ್ಬರೂ ಬೆಳೆಸಿಕೊಳ್ಳಬೇಕಾದ ಗುಣ. ಎರಡನೆಯದು ಕಲೆಗೆ ಸಂಬಂಧಿಸಿದಂತೆ ಮಾತ್ರ 'ಗುಣ'ವೆನಿಸುವುದು, ವಾಸ್ತವ ಜಗತ್ತಿನಲ್ಲಿ ಅದು ಅವಗುಣವೆನಿಸುವುದು. ವ್ಯಂಗ್ಯವೆಂದರೆ, ಇವೆರಡರ ನಡುವಿನ ವ್ಯತ್ಯಾಸವನ್ನರಿಯದೆ, ಅಭಿವ್ಯಕ್ತಿಯ ಬದಲು ಅಭಿನಯವೇ ನಿಜವಾಗಿ ಯಶಸ್ಸಿಗೆ ಬೇಕಾಗಿರುವ ಗುಣವೆಂದು ಹಲವರು ನಂಬುತ್ತಾರೆ; ಅದನ್ನೇ ಜೀವನದುದ್ದಕ್ಕೂ ಪ್ರಯೋಗಿಸುತ್ತಾರೆ. ನಿಜಜೀವನದಲ್ಲೂ ಅಭಿನಯ ಮಾಡುವವರನ್ನು ಸಾಮಾನ್ಯವಾಗಿ ಯಾರೂ ನಂಬುವುದಿಲ್ಲ; 'ವ್ಯವಹಾರ ಚತುರರು' ಎನ್ನುತ್ತಾರೆ. ಆದರೆ ಸರಿಯಾಗಿ ಅಭಿವ್ಯಕ್ತಿ ಮಾಡದವರನ್ನು 'ನಿನ್ನನ್ನು ನೀನು ಸರಿಯಾಗಿ ಅಭಿವ್ಯಕ್ತಿಗೊಳಿಸುವುದನ್ನು ಕಲಿ' ಎನ್ನುತ್ತಾರೆ; ಅದು ಬದುಕಿನಲ್ಲಿ ಅಗತ್ಯವೆಂದೇ ಪರಿಗಣಿಸಲಾಗುತ್ತಿದೆ.

ನಾಟಕ, ಸಿನಿಮಾ ನೃತ್ಯ ಮೊದಲಾದ ಕಲೆಗಳಲ್ಲಿ ವಾಸ್ತವತೆಯ ಅನುಕರಣೆಯಿದೆ; ಅಭಿನಯದ ಮೂಲಕ ಅದು ಮರುಸೃಷ್ಟಿಗೊಳ್ಳುತ್ತದೆ. ಅದು ವಾಸ್ತವಕ್ಕೆ ಎಷ್ಟು ಹತ್ತಿರ ಎಂಬುದು ಒಂದು ದೃಷ್ಟಿಕೋನ; ಹೀಗೆ ಅಭಿನಯಿಸಲ್ಪಟ್ಟಾಗ ಹೊಸ ಅರ್ಥ, ಹೊಸ ಬೆಳಕು ಏನೇನು ಸೃಷ್ಟಿಗೊಂಡಿತು, ಯಾವ ಬಗೆಯಲ್ಲಿ ಅದು ಪ್ರೇಕ್ಷಕರಿಗೆ ಆನಂದ ನೀಡಿತು – ಇದು ಇನ್ನೊಂದು ದೃಷ್ಟಿಕೋನ. ಈ ಎರಡು ಮಾನದಂಡಗಳ ಮೂಲಕ ಕಲೆಯನ್ನು ಅಳೆದು, ಅದು ಜೀವನವನ್ನು ಹೇಗೆ ಕಂಡಿತು ಎಂಬುದು ಮುಖ್ಯವಾಗುತ್ತದೆ. ಕಲೆಯ ವಿಮರ್ಶೆ, ಚಿಂತನೆ, ಮೀಮಾಂಸೆ ನಡೆಸುವವರು ಕೊಡುವ ಅಂತಿಮ ತೀರ್ಮಾನವಿಷ್ಟೆ: ಅದು ಎಷ್ಟು ರಸಾಸ್ವಾದ ನೀಡಿತು? ಅದು ಜೀವನವನ್ನು ಎಷ್ಟು ಸಮೃದ್ಧಗೊಳಿಸಿತು? ಕಲೆಯ ಪರಿಧಿಯಲ್ಲಿ ಮಾತ್ರವೇ ಸಮಾಜ ಅಭಿನಯವನ್ನು ಒಪ್ಪಿಕೊಳ್ಳುವುದು; ಅದರಾಚೆಗಲ್ಲ.

ಇನ್ನು ನಿಜಜೀವನಕ್ಕೆ ಬಂದಾಗ, ವಾಸ್ತವತೆಯ ಮುಂದೆ ಅಭಿನಯದ ತೆರೆ ಕಳಚಿ ಬೀಳುತ್ತದೆ. ಹೊರನೋಟಕ್ಕೆ ಕಂಡದ್ದೆಲ್ಲವೂ ನಿಜವಲ್ಲ ಎಂಬುದು ಹೆಚ್ಚು ತಡವಿಲ್ಲದೆ ಎಲ್ಲರಿಗೂ ಅರ್ಥವಾಗುತ್ತದೆ. ನಗರಜೀವನದಲ್ಲಿ ಕಣ್ಣಿಗೆ ರಾಚುವ ಬೆಡಗು ಬಿನ್ನಾಣಗಳು, ಜಾಹೀರಾತು ಹಾಗೂ ಮಾಧ್ಯಮಗಳು ಕಟ್ಟಿಕೊಡುವ ಬಣ್ಣಬಣ್ಣದ ಬದುಕು ನಿಜವಲ್ಲ ಎಂಬುದು ಪ್ರತಿ ಗಳಿಗೆಯಲ್ಲೂ ದೃಢಗೊಳ್ಳುತ್ತದೆ. ಆದರೂ ಆಧುನಿಕ ಜೀವನದಲ್ಲಿ ಈ ಬೆಡಗಿನ ನಾಗಾಲೋಟವೇಕೆ?

### ಮಾಯಾ ಪ್ರಪಂಚ

ಸಾಂಖ್ಯದರ್ಶನದಲ್ಲಿ ಒಂದು ಸುಂದರವಾದ ಚಿತ್ರವಿದೆ: ಪುರುಷನು ತನ್ನ ನೈಜಸ್ವರೂಪವನ್ನು ಅರಿತು, ಪ್ರಕೃತಿಗಿಂತ ತಾನು ಬೇರೆ ಎಂದರಿತಾಗ ಪ್ರಕೃತಿ ಅವನನ್ನು ಬಿಟ್ಟು ಓಡುವುದು – 'ತನ್ನ ನಿಜರೂಪ ತೋರಿಸಿದ ನರ್ತಕಿಯಂತೆ' *(ಸಾಂಖ್ಯಕಾರಿಕಾ, ೫೯).* ಆದರೆ ಹೀಗಾಗುವುದು ಪುರುಷನಲ್ಲಿ ಪೂರ್ಣಜ್ಞಾನವುಂಟಾದಾಗ ಮಾತ್ರ. ಆದರೆ ಆಧುನಿಕ ಜಗತ್ತಿನಲ್ಲಿ ನರ್ತಕಿ ತನ್ನ ನಿಜರೂಪ ತೋರಿಸಿಕೊಂಡ ನಂತರವೂ ನರ್ತಿಸುತ್ತಲೇ ಇದ್ದಾಳೆ; ಪುರುಷನನ್ನು ಮರುಳುಗೊಳಿಸುತ್ತಲೇ ಇದ್ದಾಳೆ. ಬೆಡಗಿನ ಪ್ರಪಂಚ ಎಷ್ಟೇ ಮಿಥ್ಯೆಯೆಂದರಿತರೂ, ಆಧುನಿಕ ಜಗತ್ತು ಪ್ರತಿಕ್ಷಣವೂ ಹೊಸ ಹೊಸ ಚಮತ್ಕಾರಗಳನ್ನು ಮಾಡುತ್ತಲೇ ಇದೆ; ಬಣ್ಣ ಬಣ್ಣದ ಕನಸುಗಳನ್ನು ಕಟ್ಟಿಕೊಡುತ್ತಲೇ ಇದೆ. ಹೀಗೆ ಅಭಿನಯದ, ತೋರಿಕೆಯ ಜಗತ್ತಿಗೆ ಕೊನೆಯಿಲ್ಲದಾಗಿದೆ. ಟಿ.ವಿ, ಕಂಪ್ಯೂಟರ್, ಮೊಬೈಲ್, ಸಿನಿಮಾಗಳ ಜಗತ್ತೇ ನಿಜವೆನಿಸುತ್ತದೆ; ವಾಸ್ತವ ಪ್ರಪಂಚವೇ ಬೇಡವಾಗುತ್ತದೆ.

**'ಇಂದ್ರಿಯೇಭ್ಯಃ ಪರಾ ಹ್ಯರ್ಥಾಃ'** ಎನ್ನುತ್ತದೆ ಕಠೋಪನಿಷತ್ತು. ಇಂದ್ರಿಯಗಳಿಗಿಂತ ಅವುಗಳನ್ನು ಸೆಳೆದು ಮರುಳುಗೊಳಿಸುವ ವಿಷಯ ವಸ್ತುಗಳು ಹೆಚ್ಚು ಶಕ್ತಿಶಾಲಿ ಎಂದು ಅದರರ್ಥ. ಸಾಮಾನ್ಯವಾಗಿ ಸ್ಥೂಲವಸ್ತುಗಳಿಗಿಂತ ಸೂಕ್ಷ್ಮವಸ್ತುಗಳೇ ಶಕ್ತಿಶಾಲಿಯೆನ್ನುವುದು ನಿಯಮ. ಉದಾಹರಣೆಗೆ, ಕಂಪ್ಯೂಟರ್ ಭಾಷೆಯಲ್ಲಿ ಹೇಳುವಾಗ, ಸ್ಥೂಲಯಂತ್ರ (hardware) ಮತ್ತು ಸೂಕ್ಷ್ಮಯಂತ್ರ (software) ಗಳಿವೆ. ಇವುಗಳಲ್ಲಿ ಸೂಕ್ಷ್ಮಯಂತ್ರವೇ ಹೆಚ್ಚು ಶಕ್ತಿಶಾಲಿ. ಅಂತೆಯೇ, ದೇಹಕ್ಕಿಂತ ಇಂದ್ರಿಯಗಳು ಸೂಕ್ಷ್ಮ ಹಾಗೂ ಶಕ್ತಿಶಾಲಿ. ಇಂದ್ರಿಯಗಳಿಗಿಂತ ಮನಸ್ಸು ಸೂಕ್ಷ್ಮ ಹಾಗೂ ಶಕ್ತಿಶಾಲಿ. ಮನಸ್ಸಿಗಿಂತ ಬುದ್ಧಿ, ಬುದ್ಧಿಗಿಂತ ಆತ್ಮ ಸೂಕ್ಷ್ಮ ಹಾಗೂ ಶಕ್ತಿಶಾಲಿ. ಇದು ಸಾಮಾನ್ಯ ನಿಯಮ. ಆದರೆ ಕಠೋಪನಿಷತ್ತಿನಲ್ಲಿ ಹೇಳಿರುವ

‘ಇಂದ್ರಿಯಗಳಿಗಿಂತ ವಿಷಯವಸ್ತು ಶಕ್ತಿಶಾಲಿ’ ಎಂಬ ಮಾತು, ಈ ಸಾಮಾನ್ಯ ನಿಯಮಕ್ಕೆ ಹೊಂದಿಕೆಯಾಗುವುದಿಲ್ಲ. ಆದರೆ ಈಗಿನ ಪ್ರಪಂಚವನ್ನು ಗಮನಿಸಿದಾಗ, ಉಪನಿಷತ್ತಿನ ಈ ಮಾತು ಸತ್ಯವೆನಿಸುತ್ತದೆ. ನಮ್ಮ ಪಂಚೇಂದ್ರಿಯಗಳನ್ನು ಮರುಳು ಮಾಡುವ ದ್ರವ್ಯಗಳ ರಾಶಿ ರಾಶಿ ಪ್ರದರ್ಶನ ನಡೆಯುತ್ತಿದೆ; ನಮ್ಮ ಎಲ್ಲ ಇಂದ್ರಿಯಗಳೂ ಅವುಗಳತ್ತ ಆಕರ್ಷಿಸಲ್ಪಟ್ಟು, ಅತ್ತ ಧಾವಿಸುತ್ತವೆ. ಮನಸ್ಸು, ಬುದ್ಧಿ, ಆತ್ಮ ಎಲ್ಲವೂ ಇಂದ್ರಿಯಗಳನ್ನು ಅನುಸರಿಸಿ, ವೈಭವದ ಪ್ರಪಂಚದಲ್ಲಿ ಉನ್ಮತ್ತವಾಗಿ ಮೈಮರೆಯುತ್ತವೆ. ಇದಲ್ಲವೇ ಮಾಯೆ?

### ಕಾಣದೆ ಹೋಗುವ ಸತ್ಯ

ಕೆಲವೊಂದು ಸನ್ನಿವೇಶಗಳಲ್ಲಿ ಎರಡು ಪಂಗಡಗಳ ನಡುವೆ ನಡೆಯುವ ತರ್ಕ, ಯುಕ್ತಿ, ವಾದಗಳು ಎಷ್ಟೊಂದು ಗೊಂದಲವನ್ನು ಸೃಷ್ಟಿಸುತ್ತವೆ ಎಂದರೆ, ಸತ್ಯ ಯಾವುದು ಎಂಬುದೇ ತಿಳಿಯದೆ ಹೋಗುತ್ತದೆ; ಸತ್ಯವನ್ನು ಅರಿಯುವ ಎಲ್ಲ ಪ್ರಯತ್ನಗಳೂ ವಿಫಲವಾಗುತ್ತವೆ. ಹಲವು ರಾಜಕೀಯ ಬಿಕ್ಕಟ್ಟುಗಳು, ನ್ಯಾಯಾಲಯದ ವ್ಯಾಜ್ಯಗಳು, ಬೌದ್ಧಿಕ ನಿಲುವುಗಳ ನಡುವಿನ ತಾರ್ಕಿಕ ವಾಗ್ವಾದಗಳು ಅನೇಕ ಬಾರಿ ದಿಕ್ಕು ತಪ್ಪಿಸುತ್ತವೆ. ವಿರುದ್ಧ ಪಂಗಡಗಳ ಎರಡೂ ವಾದಗಳು ಪ್ರಬಲವಾಗಿವೆ ಎನಿಸುತ್ತದೆ. ಅವುಗಳ ಹಗ್ಗ–ಜಗ್ಗಾಟದಲ್ಲಿ ಸತ್ಯ ಬಸವಳಿದು ಮರೆಯಾಗಿಬಿಡುತ್ತದೆ. ಆಶ್ಚರ್ಯವೆಂದರೆ, ಎಲ್ಲರೂ ಸತ್ಯವನ್ನು ಕುರಿತೇ ಮಾತನಾಡುತ್ತಾರೆ; ತಾವು ಸತ್ಯವನ್ನು ಪ್ರತಿಪಾದಿಸುತ್ತಿದ್ದೇವೆ ಎಂದೇ ಹೇಳುತ್ತಾರೆ. ಆದರೆ ಯಾರ ನಿಲುವು ಕೂಡಾ ಸತ್ಯವಾಗಿರುವುದಿಲ್ಲ – ಇದೇ ವ್ಯಂಗ್ಯ. ಪ್ರಪಂಚದ ಇತಿಹಾಸದಲ್ಲಿ ತೀವ್ರ ಬಿಕ್ಕಟ್ಟಿಗೆ ಕಾರಣವಾಗಿರುವ ಘಟನೆಗಳೆಷ್ಟೋ, ಸತ್ಯವು ಶಾಶ್ವತವಾಗಿ ಮುಚ್ಚಿಹೋಗಿರುವ ಪ್ರಸಂಗಗಳೆಷ್ಟೋ! ಒಟ್ಟಿನಲ್ಲಿ, ಸತ್ಯವೆಂಬುದು ಒಂದು ಇದ್ದೇ ಇದ್ದರೂ, ಅದರ ಸ್ವರೂಪ ಮರೆಯಾಗಿ, ವಿವಿಧ ಹಿತಾಸಕ್ತಿಗಳ ‘ಸತ್ಯವೆಂದು ತೋರಿಸುವಿಕೆ’ಯೇ ಎದ್ದು ನಿಂತ ಘಟನೆಗಳಲ್ಲೆಲ್ಲ ಮಾನವನ ನೈತಿಕ ಅಧಃಪತನವಾಗಿದೆ; ಅವನ ಶ್ರೇಷ್ಠ ಮೌಲ್ಯಗಳಿಗೆ ಅಪಚಾರವಾಗಿದೆ. ಇಂದಿನ ಬೆಡಗಿನ ಜಗತ್ತು ತೋರಿಸಿಕೊಡುತ್ತಿರುವ ಸುಳ್ಳಿನ ಪ್ರಪಂಚದಲ್ಲಿ ನಮ್ಮ ಯುವಜನತೆ ಮರಳಾಗುತ್ತದೆ; ಅದರೊಂದಿಗೇ ನಮ್ಮ ನೈತಿಕ ಮೌಲ್ಯ ಕೂಡ ಮರೆಯಾಗುತ್ತಿದೆ. ‘ಎಲ್ಲವೂ ಮಾಯೆ ಎಂದಾದರೆ, ಮಾಯೆಯಲ್ಲಿ ಮುಳುಗಿ ತೇಲಬಾರದೇಕೆ?’ ಎಂಬ ಮನೋಭಾವವಿದು. ದೇಶದಲ್ಲೆಲ್ಲ ಲಂಚ, ಭ್ರಷ್ಟಾಚಾರ ತಾಂಡವವಾಡುತ್ತಿರುವಾಗ, ನಾವೂ ಅದರಲ್ಲಿ ಮುಳುಗಿ ತೇಲಾಡಿದರೆ ಏನು ತೊಂದರೆ ಎಂದೇ ಅವರು ಪ್ರಶ್ನಿಸುತ್ತಾರೆ.

ಭವಿಷ್ಯ ಭಾರತವನ್ನು ಕಂಡುಕೊಳ್ಳಬೇಕಾದವರು ಈ ಅಪಾಯವನ್ನು ಮನಗಾಣಬೇಕು.

### ವಾಸ್ತವತೆ ಮತ್ತು ಜೀವನ

ಇಷ್ಟಾದರೂ ಮಾನವನ ಜೀವನದಲ್ಲಿ ಎಲ್ಲ ಮೌಲ್ಯಗಳೂ ಸತ್ಯವನ್ನೇ ಆಧರಿಸಿ ನಿಂತಿವೆ ಎಂಬುದನ್ನು ಅಲ್ಲಗಳೆಯುವಂತಿಲ್ಲ. ‘ತೋಳ ಬಂತು ತೋಳ’ ಎಂಬ ಪ್ರಸಿದ್ಧ ನೀತಿಕತೆಯನ್ನೇ ತೆಗೆದುಕೊಳ್ಳೋಣ:

ಒಂದೂರಿನಲ್ಲಿ ಒಬ್ಬ ಮೂರ್ಖ ಹುಡುಗನಿದ್ದನಂತೆ. ಅವನು ತಮಾಷೆಗಾಗಿ ಎಲ್ಲರೂ ಕೇಳುವಂತೆ, ‘‘ತೋಳ ಬಂತು ತೋಳ.. ದಯವಿಟ್ಟು ಕಾಪಾಡಿ’’ ಎಂದು ಕೂಗಿಕೊಂಡು, ಅವರನ್ನೆಲ್ಲ ಗಾಬರಿಗೊಳಿಸುತ್ತಿದ್ದ. ಜನ ಅವನ ಬಳಿಗೆ ಬಂದು, ‘‘ಎಲ್ಲಿ ತೋಳ, ತೋರಿಸು’’ ಎಂದು ಬಡಿಗೆ, ಬೆತ್ತ ಇವುಗಳೊಂದಿಗೆ ತೋಳವನ್ನು ಹೊಡೆದು ಕೊಲ್ಲಲು ಮುಂದಾದರೆ, ಆತ ಗೊಳ್ಳನೆ ನಕ್ಕುಬಿಡುತ್ತಿದ್ದ. ‘‘ಸುಳ್ಳು ಹೇಳಿದೆ.. ನೀವೆಲ್ಲರೂ ಮೂರ್ಖರಾದಿರಿ!’’ ಎಂದು ಹಂಗಿಸುತ್ತಿದ್ದ. ಜನ ಅವನನ್ನು ಬಯ್ಯುತ್ತ ಅಲ್ಲಿಂದ ಹೊರಟು ಹೋಗುತ್ತಿದ್ದರು. ಹೀಗೆ ಹಲವು ಬಾರಿ ಜನರನ್ನು ಮೋಸಮಾಡಿದ ಆ ಮೂರ್ಖ ಹುಡುಗ. ಕೊನೆಗೊಂದು ದಿನ ನಿಜವಾಗಿಯೂ ಅಲ್ಲಿಗೆ ತೋಳ ಬಂದೇಬಿಟ್ಟಿತು. ಈ ಬಾರಿ ಭಯಭೀತನಾದ ಹುಡುಗ ಎಷ್ಟು ಜೋರಾಗಿ ಕೂಗಿಕೊಂಡರೂ ಜನ ಬರಲಿಲ್ಲ. ಅವರು ಮಾತನಾಡಿಕೊಂಡರು, ‘‘ಓ! ಅದೇ ಮೂರ್ಖ ಹುಡುಗ.. ಸುಳ್ಳು ಹೇಳಿ ನಮ್ಮನ್ನು ಮೋಸಗೊಳಿಸುತ್ತಾನೆ’’ ಎಂದು ಸುಮ್ಮನಿದ್ದುಬಿಟ್ಟರು. ತೋಳ ಹುಡುಗನ್ನು ತಿಂದು ಮುಗಿಸಿಬಿಟ್ಟಿತು.

ಜನ ಅನುಭವದಿಂದ ಕಲಿಯುತ್ತಾರೆ. ಜೀವನದಲ್ಲಿ ಏಟು ತಿಂದು ಕಲಿತವರು ಅದನ್ನು ಮರೆಯುವುದಿಲ್ಲ. ಒಬ್ಬ ವ್ಯಕ್ತಿ ಒಳ್ಳೆಯವನೆನಿಸಿಕೊಳ್ಳಬೇಕಾದರೆ ಅವನೆಷ್ಟು ಪ್ರಾಮಾಣಿಕ ಎಂಬುದು ಮುಖ್ಯವಾಗುತ್ತದೆ. ಅವನನ್ನು ನಂಬಬಹುದೇ ಎಂದೇ ಪ್ರತಿಯೊಬ್ಬರೂ ಪ್ರಶ್ನಿಸಿಕೊಳ್ಳುತ್ತಾರೆ. ವ್ಯಾವಹಾರಿಕ ಜಗತ್ತಿನಲ್ಲಿ ಪ್ರತಿಯೊಬ್ಬರೂ ಇತರರನ್ನು ಅಳೆಯುವುದು ಇದೇ ಮಾನದಂಡದಿಂದ : ಅವನು ನಂಬಿಕೆಗೆ ಅರ್ಹನೆ, ಅವನೊಂದಿಗೆ ವ್ಯವಹಾರ ಮಾಡಿದರೆ ನನಗೆ ಲಾಭವಾದೀತೇ – ಎಂದು. ವಿಶ್ವಾಸ, ಶ್ರದ್ಧೆ, ನಂಬಿಕೆ ಇವೆಲ್ಲವೂ ಸತ್ಯವನ್ನು ಆಧರಿಸಿರುವುದರಿಂದ, ಅದು ಎಲ್ಲ ಕಾಲಕ್ಕೂ ಸಲ್ಲುವ ಮೂಲಭೂತ ಮೌಲ್ಯವೆನ್ನಬೇಕು. ಅಪ್ರಾಮಾಣಿಕತೆಯನ್ನೇ ಅವಲಂಬಿಸಿರುವ ವ್ಯಾಪಾರೀಕರಣ, ರಾಜಕಾರಣ, ಸಿದ್ಧಾಂತಗಳು ಕೇವಲ ಅಲ್ಪಕಾಲಿಕವಾಗಿ ವಿಜೃಂಭಿಸುತ್ತವೆ; ಅವು ಜೀವನದ ಮೂಲಭೂತ ಅಂಗವಾಗಲಾರವು. ಅವು ತಾತ್ಕಾಲಿಕ ಲಾಭದಾಯಕ ಉದ್ಯಮವೆನಿಸಿದರೂ, ಸ್ವಲ್ಪ ಸಮಯದಲ್ಲೇ ನೆಲಕಚ್ಚುವುವು. ಈ ದೂರದೃಷ್ಟಿಯನ್ನು ಒಳಗೊಂಡಿದ್ದರೆ ಮಾತ್ರ ನಮ್ಮ ಜೀವನ ಸಮೃದ್ಧವಾಗುವುದು.

### ಸ್ವಭಾವ ಮತ್ತು ಮನೋಭಾವಗಳಲ್ಲಿ

ವೈಯಕ್ತಿಕ ನೆಲೆಯಲ್ಲಿ ವಾಸ್ತವತೆ, ಸತ್ಯ – ಇದರ ಪಾತ್ರವೇನೆಂಬುದನ್ನು ಗಮನಿಸೋಣ. ಸಾಮಾನ್ಯವಾಗಿ ಮನೆಯೇ ಮೊದಲ ಪಾಠಶಾಲೆ ಎನ್ನುತ್ತಾರೆ. ತಾಯಿತಂದೆಯರ ಗುಣ ಮಕ್ಕಳಿಗೆ ಬರುತ್ತದೆ; ಹೆತ್ತವರು ಕಲಿಸಿದಂತೆ ಮಕ್ಕಳು ಬೆಳೆಯುತ್ತಾರೆ. ಮುಂದೆ ಶಾಲೆ, ವಿದ್ಯಾಭ್ಯಾಸ, ಸ್ನೇಹಿತರು ಇವುಗಳ ಪ್ರಭಾವದಿಂದ ವ್ಯಕ್ತಿಯೊಬ್ಬನ ಸ್ವಭಾವ ನಿರ್ಮಾಣಗೊಳ್ಳುತ್ತದೆ. ಆದರೆ ಈ ಎಲ್ಲ ಬಾಹ್ಯ ಅಂಶಗಳನ್ನು ಹೀರಿ ಬೆಳೆಯುವ ವ್ಯಕ್ತಿಗೆ ತನ್ನಲ್ಲಿ ಅಂತರ್ಗತವಾಗಿರುವ ಸ್ವಭಾವವೊಂದಿರುತ್ತದಲ್ಲವೆ? ಈ ಆಂತರಿಕ ಸ್ವಭಾವವೂ ಅವನ ವ್ಯಕ್ತಿತ್ವವನ್ನು ರೂಪಿಸುತ್ತದೆ. ಆದ್ದರಿಂದ ಮೌಲ್ಯ, ಆದರ್ಶಗಳನ್ನು ಬೆಳೆಸುವುದರಲ್ಲಿ, ಸಾಮಾಜಿಕ ಪರಿಸರವು ಉತ್ತಮ ಮೌಲ್ಯಗಳಾದ ಸತ್ಯಸಂಧತೆ, ಪ್ರಾಮಾಣಿಕತೆ, ಶ್ರಮಜೀವನ, ಉತ್ತಮ ಗುಣನಡತೆ ಇವನ್ನು ಪ್ರೇರೇಪಿಸುವಂತಿರಬೇಕು. ಸುಳ್ಳು, ವಂಚನೆ, ಭ್ರಷ್ಟಾಚಾರ, ಕ್ರೌರ್ಯ, ರಾಗ–ದ್ವೇಷಗಳನ್ನು ಹಬ್ಬಿಸುವ ಹಲವು ಬಗೆಯ ಪ್ರಚಾರ ಮಾಧ್ಯಮಗಳನ್ನು ಸರಕಾರವೇ ನಿಷೇಧಿಸಬೇಕು. ಎಲ್ಲ ಬದಲಾವಣೆಗಳೂ ಜನರ ಪ್ರತಿಭಟನೆಯಿಂದಲೇ

ಸಾಧ್ಯವಾಗಬೇಕು ಎಂಬುದು ಪ್ರಜಾಪ್ರಭುತ್ವದ ವೈಫಲ್ಯವಾದೀತು. ಪ್ರಜೆಗಳ ಪ್ರತಿನಿಧಿಗಳಿಗೂ ಅರಿವು, ಜವಾಬ್ದಾರಿ ಇರಬೇಕು.

ವೈವಿಧ್ಯತೆ ಪ್ರಪಂಚದ ಮೂಲಭೂತ ನಿಯಮವಾಗಿರುವುದರಿಂದ ವ್ಯಕ್ತಿಗಳ ಸ್ವಭಾವದಲ್ಲಿ ಭಿನ್ನತೆಯದ್ದೇ ಇರುತ್ತದೆ. ಆದರೆ ಸಮಾಜದ ಒಟ್ಟು ಪ್ರವೃತ್ತಿ ಎಷ್ಟರಮಟ್ಟಿಗೆ ವಾಸ್ತವತೆಯನ್ನು ಪುರಸ್ಕರಿಸಿ ಪೋಷಿಸುತ್ತದೆ ಎಂಬುದು ಮುಖ್ಯವಾಗುತ್ತದೆ. ಈ ದೃಷ್ಟಿಯಿಂದ ನೋಡುವಾಗ, ಭಾರತೀಯ ಸಮಾಜವಿನ್ನೂ ತನ್ನ ಸಂಸ್ಕೃತಿ, ಪರಂಪರೆಯ ಮೌಲ್ಯಗಳನ್ನು ದೃಢವಾಗಿ ಅವಲಂಬಿಸಿದೆ; ಆದ್ದರಿಂದ, ಅದರ ಅಂತಃಸತ್ವವು ಇನ್ನೂ ವಾಸ್ತವತೆಯಿಂದ ವಿಮುಖವಾಗಿಲ್ಲ ವೆನ್ನಬೇಕು. ಪಾಶ್ಚಾತ್ಯ ಜಗತ್ತಿನ ಆಧುನಿಕತೆಯ ಪ್ರಭಾವ ಹೆಚ್ಚಿರುವ ನಗರಗಳಲ್ಲಿ ಮಾತ್ರ ಸಾಂಸ್ಕೃತಿಕ ಮೌಲ್ಯಗಳು ಸಡಿಲವಾಗುತ್ತಿವೆ. ಅಷ್ಟೇ ವೇಗವಾಗಿ ಅವು ಗ್ರಾಮೀಣ ಪರಿಸರವನ್ನೂ ಕಬಳಿಸುತ್ತಿವೆ ಎನ್ನುವುದೂ ನಿಜ. ಈ ಮಾರ್ಪಾಡು ಈಚೆಗೆ ಸುದ್ದಿಮಾಧ್ಯಮ, ಎಲಕ್ಟ್ರಾನಿಕ್ ಮಾಧ್ಯಮಗಳಿಂದ ತೀವ್ರಗತಿಯಲ್ಲಿ ನಡೆಯುತ್ತಿದೆ ಎಂಬುದೊಂದೇ ನಮ್ಮ ಮುಂದಿರುವ ಅಪಾಯ. ಈ ಬಗೆಯ ಸದ್ದಿಲ್ಲದ ಬದಲಾವಣೆಯನ್ನು ತಡೆಯಲು ಅಷ್ಟೇ ಪ್ರಬಲವಾದ ಅಸ್ತ್ರಗಳು ನಮ್ಮಲ್ಲಿಲ್ಲವೆ? ಇವೇ ಸುದ್ದಿ ಮಾಧ್ಯಮಗಳು, ಎಲಕ್ಟ್ರಾನಿಕ್ ಮಾಧ್ಯಮಗಳು ಈ ದಿಕ್ಕಿನಲ್ಲಿ ಕೆಲಸ ಮಾಡಲಾರವೆ?

ಇಲ್ಲಿ ಮತ್ತೆ ವಿವಿಧ ಹಿತಾಸಕ್ತಿಗಳ, ಸೆಳೆತಗಳ ಶಕ್ತಿ ಕೆಲಸ ಮಾಡುತ್ತದೆ. ಸಾಮಾಜಿಕ, ರಾಜಕೀಯ ಹಾಗೂ ವೈಚಾರಿಕ ಸೆಳೆತಗಳಿಂದ ಕೂಡಿದ ಸಂಕೀರ್ಣವಾದ ಪರಿಸ್ಥಿತಿಯಲ್ಲಿ ಇಂದು ನಮ್ಮ ದೇಶವಿರುವುದರಿಂದ, ಪ್ರಜ್ಞಾಪೂರ್ವಕವಾಗಿ ನಮ್ಮ ಮಾಧ್ಯಮಗಳನ್ನು ಬಳಸಿಕೊಂಡು, ಸಮರ್ಥವಾಗಿ ಆಧುನಿಕತೆಯ ಪ್ರಭಾವವನ್ನು ಎದುರಿಸುವುದೊಂದೇ ಎಲ್ಲ ಸಮಸ್ಯೆಗಳನ್ನು ನಿವಾರಿಸಬಹುದಾದ ಮಾರ್ಗವಾಗಿದೆ.

### ಸತ್ಯ: ಮೂಲಭೂತ ಆವಶ್ಯಕತೆ

ಹಲವು ಸೂಕ್ಷ್ಮ ಸಂಗತಿಗಳು ಜೀವನದಲ್ಲಿ ಕಣ್ಣಿಗೆ ಕಾಣಿಸದೆ ಇರಬಹುದು. ಆದರೆ ಅವು ಅದೆಷ್ಟು ಅನಿವಾರ್ಯವೆಂದು ತಿಳಿದು ಬರುವುದು, ಅವುಗಳು ಇಲ್ಲವಾದಾಗಲೇ. ಉದಾಹರಣೆಗೆ, ಗಾಳಿ, ನೀರು. ಗಾಳಿಯಿಲ್ಲದೆ ಒಂದು ಕ್ಷಣವೂ ಬದುಕಿರಲಾರೆವು. ನೀರಿಲ್ಲದೆ ಒಂದು ದಿನವೂ ಜೀವಿಸಲಾರೆವು. ಆದರೆ ಈ ಅನಿವಾರ್ಯತೆ ನಮ್ಮ ಅರಿವಿಗೆ ಬರುವುದೇ ಇಲ್ಲ, ಪ್ರತಿದಿನವೂ ಸಹಜವಾಗಿ ಕಳೆದುಹೋಗುತ್ತದೆ. ಪ್ರತಿಕ್ಷಣ ನಾವು ಉಸಿರಾಡುತ್ತೇವೆ, ಬಾಯಾರಿದಾಗಲೆಲ್ಲ ನೀರು ಕುಡಿಯುತ್ತೇವೆ. ನೀರು ಸಿಗದ ಸನ್ನಿವೇಶದಲ್ಲಿ ಸಿಲುಕಿಕೊಂಡಾಗ, ಮರುಭೂಮಿಯಲ್ಲಿ ಒಂದು ಹನಿ ನೀರಿಲ್ಲದೆ ಒದ್ದಾಡುವಾಗ ಮಾತ್ರ ನಾವು ಬೆವರು ಸುರಿಸುತ್ತ, ಒಣಗಿದ ಗಂಟಲಲ್ಲಿ ಉಗುಳು ನುಂಗುತ್ತ, ''ಅಯ್ಯೋ, ಒಂದು ಗುಟುಕು ನೀರೂ ಸಿಗದಾಯಿತಲ್ಲ! ಒಂದೇ ಒಂದು ಬೊಗಸೆ ನೀರು ಸಿಕ್ಕಿದರೆ!..'' ಎಂದು ಗೋಗರೆಯುತ್ತೇವೆ. ಇನ್ನು, ಉಸಿರು ಕಟ್ಟಿದಾಗ ಒಂದಿನಿತು ಗಾಳಿ ಸಿಗಲಿ ಎಂದು ಒದ್ದಾಡುವ ಜೀವ, ಗಾಳಿ ಸಿಕ್ಕಿದ ಕೂಡಲೇ ದೀರ್ಘ ಉಸಿರೆಳೆದು, ''ಅಬ್ಬಾ! ಹಾಯೆನಿಸಿತು! ಒಂದು ಕ್ಷಣ ಸತ್ತೇ ಹೋಗುತ್ತಿದ್ದೆ'' ಎನ್ನುತ್ತದೆ!

ಮಾನವನ ಆಂತರಿಕ, ಬಾಹ್ಯ ಎರಡೂ ಪ್ರಪಂಚಗಳಲ್ಲಿ ಸತ್ಯವೆಂಬುದು ನೀರು, ಗಾಳಿ ಇದ್ದಂತೆ. ಪ್ರತಿಕ್ಷಣವೂ ನಮ್ಮ ಇರುವಿಕೆಯು ಯಾವುದು ವಾಸ್ತವವೋ ಅದರತ್ತ ನೋಡುವುದು. ಯಾವುದು ಅಸತ್ಯವೋ, ಯಾವುದು ನಿಜವೆಂಬಂತೆ ಭ್ರಮೆಯನ್ನು ಹುಟ್ಟಿಸಿ ನಮ್ಮನ್ನು ಮೋಸಗೊಳಿಸುವುದೋ ಅದನ್ನು ನಮ್ಮ ಅಂತರಂಗ, ಬಹಿರಂಗವೆರಡೂ ತ್ಯಜಿಸಬಯಸುವುದು. ಇದಕ್ಕೆ ಕಾರಣ, ನಮ್ಮ ಅಸ್ತಿತ್ವದ ಪ್ರತಿಯೊಂದೂ ಸತ್ಯವನ್ನೇ ಅವಲಂಬಿಸಿರುವುದು. 'ಸತ್ಯ'ವೆಂದರೇ ಅಸ್ತಿತ್ವ ; ಆದ್ದರಿಂದ ಅದು ಎಲ್ಲ ಇರುವಿಕೆಗೆ ಆಧಾರ. ಇಂಥ 'ಸತ್ಯ' ವೆಂಬುದು ಭೌತಿಕಪ್ರಪಂಚ, ಮಾನಸಿಕ ಪ್ರಪಂಚ ಹಾಗೂ ಆಧ್ಯಾತ್ಮಿಕ ಪ್ರಪಂಚಗಳಿಗೆ ಆಧಾರ; ಅದಕ್ಕೆ ನಿಷ್ಠರಾಗಿರುವುದರಿಂದ ಮಾತ್ರ ನಾವು ಸತ್ಯದಲ್ಲಿ ಜೀವಿಸಬಹುದು. ಅದರಿಂದಲೇ ಎಲ್ಲ ಮೌಲ್ಯ, ನೈತಿಕತೆ, ಧರ್ಮ, ಆಧ್ಯಾತ್ಮಿಕತೆಗಳು ಸಫಲವಾಗುವುವು. ಶ್ರೀರಾಮಕೃಷ್ಣರು, ''ಕಲಿಯುಗದಲ್ಲಿ ಸತ್ಯವಚನವೇ ತಪಸ್ಸು'' ಎಂದಿರುವುದು ಈ ಹಿನ್ನೆಲೆಯಲ್ಲಿ ಹೆಚ್ಚು ಅರ್ಥಪೂರ್ಣವಾಗಿದೆ.

### ಅಭಿವ್ಯಕ್ತಿ ಸ್ವಾತಂತ್ರ್ಯ

ಇತ್ತೀಚೆಗೆ ಸಾಮಾಜಿಕ ವಲಯಗಳಲ್ಲಿ ಹಾಗೂ ಸುದ್ದಿ ಮಾಧ್ಯಮಗಳಲ್ಲಿ ಹೆಚ್ಚು ಚರ್ಚೆಗೆ ಒಳಗಾಗುತ್ತಿರುವ ವಿಷಯವೆಂದರೆ ಅಭಿವ್ಯಕ್ತಿ ಸ್ವಾತಂತ್ರ್ಯ. ಸಭೆ, ಸಮಾರಂಭಗಳಲ್ಲಿ, ಪತ್ರಿಕೆ-ರೇಡಿಯೋ-ದೂರದರ್ಶನಗಳಲ್ಲಿ , ವಾಟ್ಸಪ್, ಫೇಸ್‌ಬುಕ್, ಟ್ವಿಟರ್‌ಗಳಲ್ಲಿ ಹಲವು ವಿಷಯಗಳನ್ನು ಕುರಿತು ಯಾರು ಬೇಕಾದರೂ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಬಹುದು; ಏನನ್ನು ಬೇಕಾದರೂ ಹೇಳಬಹುದು. ಪ್ರತಿಯೊಬ್ಬರಿಗೂ ಅವಕಾಶವೆಂಬ ಅರ್ಥದಲ್ಲಿ ಇದು ಆಧುನಿಕ ಜಗತ್ತಿನ ಅತ್ಯದ್ಭುತ ಆವಿಷ್ಕಾರ; ಇದರಲ್ಲಿ ಎರಡು ಮಾತಿಲ್ಲ. ಆದರೆ ಇದರಿಂದ ಉಂಟಾಗುವ ಅನಾಹುತಗಳೂ ಕಡಿಮೆಯೇನಿಲ್ಲ. ನೂರು ಜನ ಬೊಬ್ಬಿಟ್ಟರೆ ಸತ್ಯ ಸುಳ್ಳಾಗದು; ಸುಳ್ಳನ್ನು ಸತ್ಯವನ್ನಾಗಿ ಮಾಡಲಾಗದು. ದುರಂತವೆಂದರೆ, ಇಂದು ಇಂಥ ಕೆಲಸಗಳೇ ನಡೆಯುತ್ತಿವೆ. ಅಭಿವ್ಯಕ್ತಿ ಸ್ವಾತಂತ್ರ್ಯದ ನೆಪದಲ್ಲಿ ಮಾರಕವಾದ, ಸತ್ಯದೂರವಾದ ವಿಚಾರಗಳನ್ನು ಹರಡಲಾಗುತ್ತಿದೆ. ಹಿಂಸೆ, ಕ್ರೌರ್ಯಗಳನ್ನು ಪ್ರಚೋದಿಸುವ ಕಾರ್ಯಗಳಿಗೂ ಪರವಾನಗಿ ನೀಡಬೇಕೆಂಬ ವಾದವನ್ನು ಹಲವರು ಒಡ್ಡುತ್ತಿದ್ದಾರೆ. ಹಲವೆಡೆ ರಾಷ್ಟ್ರಕ್ಕೆ, ಮಹಾತ್ಮರಿಗೆ, ಧರ್ಮಕ್ಕೆ ಅವಹೇಳನ ಮಾಡುವ ಕಾರ್ಯ ನಡೆಯುತ್ತಿದೆ. ಆದರೆ ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೂ ಒಂದು ಮಿತಿಯಿದೆ. ಇತರರ ನಿಂದನೆ, ಅಸತ್ಯದ ಪ್ರಚಾರಕ್ಕೆ, ಹಿಂಸಾಚಾರದ ಪ್ರೇರಣೆಗೆ ಅದು ಒಂದು ಕಾರಣವಾಗಬಾರದು. ಆದರೆ ಇದಕ್ಕೆ ಸರಿ-ತಪ್ಪುಗಳ ಮಾನದಂಡವನ್ನು ನೀಡುವವರು ಯಾರು? ಯಾವ ಬಗೆಯ ಮಾನದಂಡವನ್ನು ನೀಡಬೇಕು? ಒಟ್ಟು ಸಮಾಜವನ್ನು ಮುನ್ನಡೆಸುವ, ಎಲ್ಲದಕ್ಕೂ ಜವಾಬ್ದಾರಿ ಹೊತ್ತಿರುವ ರಾಷ್ಟ್ರದ ಆಡಳಿತವೇ ಇದನ್ನು ನಿರ್ಧರಿಸಬೇಕು.

ಲೌಕಿಕ ಜೀವನದ ಸುಖಸಮೃದ್ಧಿಯಿಂದ ಕಲೆ, ಸಂಸ್ಕೃತಿ, ಧರ್ಮ ಹಾಗೂ ಆಧ್ಯಾತ್ಮಿಕತೆ ಉನ್ನತ ಸ್ಥಿತಿಗೆ ಹೋಗುತ್ತದೆ. ಎಲ್ಲಿ ಕಲೆ, ಸಂಸ್ಕೃತಿ, ಧರ್ಮ, ಆಧ್ಯಾತ್ಮಿಕತೆಗಳು ಉನ್ನತ ಸ್ಥಿತಿಯಲ್ಲಿ ಇರುತ್ತವೋ, ಅಲ್ಲಿ ಲೌಕಿಕ ಜೀವನದಲ್ಲೂ ಶಾಂತಿ, ಸುಖ, ನೆಮ್ಮದಿಗಳು ಹರಿದಾಡುತ್ತವೆ. ಪರಸ್ಪರ ಪೂರಕವಾದ ಈ ಬಾಹ್ಯ-ಆಂತರಿಕ ಬದುಕನ್ನು ಒಂದುಗೂಡಿಸುವ ಮೌಲ್ಯಗಳೇ ಸತ್ಯ ಹಾಗೂ ಸೌಂದರ್ಯ. ಇವೆರಡನ್ನೂ ಅರಿತುಕೊಂಡು, ಜನಜೀವನವನ್ನು ಮುನ್ನಡೆಸುವ ಕಾರ್ಯ ನಮ್ಮದಾಗಬೇಕು.

# ಮನೋನಿಗ್ರಹ



❁ ಎಲ್ಲಾ ಮನಸ್ಸಿನ ಮೇಲೆ ನಿಂತಿದೆ. ಮನಸ್ಸೇ ಬಂಧನಕ್ಕೆ ಕಾರಣ, ಮನಸ್ಸೇ ಮುಕ್ತಿಗೆ ಕಾರಣ. ಮನಸ್ಸಿಗೆ ಯಾವ ಬಣ್ಣ ಕೊಟ್ಟರೆ ಅದು ಆ ಬಣ್ಣ ಧರಿಸುತ್ತದೆ. ಉದಾಹರಣೆಗೆ ಅಗಸನ ಮನೆಯಿಂದ ತಂದ ಬಟ್ಟೆ. ಕೆಂಪು ಬಣ್ಣದಲ್ಲಿ ಅದ್ದಿದರೆ ಕೆಂಪು, ನೀಲಿ ಬಣ್ಣದಲ್ಲಿ ಅದ್ದಿದ್ದರೆ ನೀಲಿ, ಹಳದಿ ಬಣ್ಣದಲ್ಲಿ ಅದ್ದಿದರೆ ಹಳದಿ, ಮತ್ತಾವ ಬಣ್ಣದಲ್ಲಿ ಅದ್ದಿದ್ದರೂ ಆ ಬಣ್ಣ ಧರಿಸುತ್ತದೆ. ನೋಡಿಲ್ಲವೆ, ಒಂದಿಷ್ಟು ಇಂಗ್ಲಿಷು ಓದುವುದಕ್ಕೆ ಕಲಿತುಕೊಂಡಿರಿ ಎಂದರೆ, ನಿಮ್ಮನ್ನು ಹೇಳದೆ ಕೇಳದೆ 'ಕೋಸ್‌ಪಿಸ್' ಎಂಬ ಇಂಗ್ಲಿಷು ಪದಗಳು ನಿಮ್ಮ ಬಾಯಿಂದ ಹೊರ ಬೀಳುವುದನ್ನ? (ಎಲ್ಲರೂ ನಗುತ್ತಾರೆ.) ಬಳಿಕ ಕಾಲಿಗೆ ಬೂಟ್ಸು, ಸಿಳ್ಳು ಹಾಕುತ್ತಾ ಆಲಾಪನೆ ಮಾಡುವುದು ಇವೆಲ್ಲಾ ಬಂದುಬಿಡುತ್ತವೆ. ಇವೆಲ್ಲಾ ಒಂದೇ ಜೊತೆ. ವಿದ್ಯಾವಂತ ಸಂಸ್ಕೃತ ಕಲಿತುಕೊಂಡಿದ್ದೇ ಆದರೆ ಪದೇ ಪದೇ ಸಂಸ್ಕೃತ ಶ್ಲೋಕಗಳನ್ನು ಎತ್ತಿ ಹೇಳುತ್ತಲೇ ಇರುತ್ತಾನೆ. ನೀನು ಕೆಟ್ಟವರೊಡನೆ ಬೆಳೆದರೆ, ನಿನ್ನ ನಡೆನುಡಿ ವ್ಯವಹಾರ ಎಲ್ಲವೂ ಅವರಂತೆ ಆಗಿಬಿಡುತ್ತವೆ; ಭಕ್ತರ ಸಹವಾಸದಲ್ಲಿ ಬೆಳೆದರೆ, ಮನಸ್ಸು ಭಗವಚ್ಚಿಂತನೆ, ಭಗವತ್ಕಥೆ ಇವುಗಳಲ್ಲೇ ನಿರತವಾಗಿರುತ್ತದೆ.

❁ ಮನಸ್ಸೇ ಎಲ್ಲಕ್ಕೂ ಕಾರಣ. ಮನುಷ್ಯನ ಒಂದು ಪಕ್ಕದಲ್ಲಿ ಹೆಂಡತಿ, ಇನ್ನೊಂದು ಪಕ್ಕದಲ್ಲಿ ಮಗಳು. ಒಬ್ಬಳಿಗೆ ಒಂದು ವಿಧದಲ್ಲಿ ಇನ್ನೊಬ್ಬಳಿಗೆ ಇನ್ನೊಂದು ವಿಧದಲ್ಲಿ ಪ್ರೀತಿ ತೋರಿಸುತ್ತಾನೆ. ಆದರೆ ಮನಸ್ಸು ಮಾತ್ರ ಒಂದೇ ಒಂದು.

❁ ಮನಸ್ಸಿನಿಂದಲೇ ಬಂಧನ, ಮನಸ್ಸಿನಿಂದಲೇ ಮುಕ್ತಿ. 'ನಾನು ಮುಕ್ತಪುರುಷ. ಸಂಸಾರದಲ್ಲಿ ಇದ್ದರೆ ತಾನೆ ಏನು, ಅರಣ್ಯದಲ್ಲಿ ಇದ್ದರೆ ತಾನೆ ಏನು, ನನಗೆಲ್ಲಿಯದು ಬಂಧನ? ನಾನು ಭಗವಂತನ ಮಗು; ರಾಜಾಧಿರಾಜನ ಮಗು. ನನಗಾವುದರ ಬಂಧನ?' ಎಂಬುದಾಗಿ ಯಾರು ಸತತ ಚಿಂತಿಸುತ್ತಾನೊ, ಆತ ಮುಕ್ತನಾಗಿ ಬಿಡುತ್ತಾನೆ. ಒಂದು ಪಕ್ಷ ಹಾವೇನಾದರೂ ಕಡಿದರೆ 'ನನ್ನನ್ನು ವಿಷ ಏನೂ ಮಾಡಲಾರದು' ಎಂಬುದಾಗಿ ದೃಢವಾಗಿ ನಂಬಿದರೆ ಆಗ ಅದರಿಂದ ಪಾರಾಗಿಬಿಡಬಹುದು. ಹಾಗೆ 'ನಾನು ಬದ್ಧನಲ್ಲ, ಮುಕ್ತ' ಎಂಬುದಾಗಿ ದೃಢವಾಗಿ ನಂಬಿದರೆ ಹಾಗೇ ಆಗಿಬಿಡಬಹುದು – ಮುಕ್ತನೇ ಆಗಿಬಿಡಬಹುದು.

❁ ಕಾಮಕಾಂಚನಗಳ ಮಧ್ಯೆ ಬಹಳ ಕಾಲ ಇದ್ದುದೇ ಆದರೆ, ಅವು ಮನಸ್ಸನ್ನು ಚೆಲ್ಲಾಪಿಲ್ಲಿ ಮಾಡಿಬಿಡುತ್ತವೆ. ಆದ್ದರಿಂದ ಬಹಳ ಎಚ್ಚರಿಕೆಯಿಂದ ಇರಬೇಕು. ಆದರೆ ಸಂನ್ಯಾಸಿಗಳು ಅಷ್ಟೊಂದು ಹೆದರಿಕೊಳ್ಳಬೇಕಾದ್ದೇನಿಲ್ಲ. ನಿಜವಾದ ತ್ಯಾಗಿಗಳು ಕಾಮಕಾಂಚನಗಳಿಂದ ಬಹಳ ದೂರದಲ್ಲೇ ಇರುತ್ತಾರೆ. ಆದ್ದರಿಂದ ಸಾಧನೆಯ ಮೂಲಕ ಆತ ಸರ್ವದಾ ಭಗವಂತನಲ್ಲಿ ತನ್ನ ಮನಸ್ಸನ್ನು ಇಡಬಲ್ಲ.

❁ ಸರ್ವದಾ ಭಗವಂತನಲ್ಲೇ ಮನಸ್ಸನ್ನಿಡಬಲ್ಲ ನಿಜವಾದ ತ್ಯಾಗಿಗಳನ್ನು ಜೇನುಹುಳುಗಳಿಗೆ ಹೋಲಿಸಬಹುದು. ಅವು ಕೇವಲ ಹೂವುಗಳ ಮೇಲೆ ಇಳಿದು ಮಧುಪಾನ ಮಾಡುತ್ತವೆ. ಯಾರು ಈ ಜಗತ್ತಿನಲ್ಲಿ ಕಾಮಕಾಂಚನಗಳ ಮಧ್ಯೆ ಇರುತ್ತಾರೊ, ಅವರ ತಮ್ಮ ಮನಸ್ಸನ್ನು ಭಗವಂತನ ಕಡೆಗೆ ತಿರುಗಿಸಬಲ್ಲರು. ಆದರೆ ಕೆಲವು ವೇಳೆ ಅವರು ಕಾಮಕಾಂಚನಗಳ ಕಡೆಗೂ ಅದನ್ನು ತಿರುಗಿಸಿಬಿಡುತ್ತಾರೆ. ಅವರು ಈ ಸಾಧಾರಣ ನೊಣಗಳ ಹಾಗೆ. ಅವು ಸಿಹಿ ತಿಂಡಿಗಳ ಮೇಲೂ ಕೂರುತ್ತವೆ, ಕೊಳೆತು ನಾರುವ ಹಣ್ಣುಗಳ ಮೇಲೂ ಕೂರುತ್ತವೆ, ಹೇಸಿಗೆ ಮೇಲೂ ಕೂರುತ್ತವೆ.

❁ ಭಗವಂತನಲ್ಲಿ ಸರ್ವದಾ ಮನಸ್ಸನ್ನಿಡುವ ಮೊದಲು ಸ್ವಲ್ಪ ಶ್ರಮಿಸಬೇಕಾಗುತ್ತದೆ; ಕೊನೆಗೆ ವಿಶ್ರಾಂತಿವೇತನ ದೊರೆಯುತ್ತದೆ.

❁ ಮನುಷ್ಯ ಯಾವ ಮಾರ್ಗ ಬೇಕಾದರೂ ಅನುಸರಿಸಲಿ, ಮನಸ್ಸು ಸ್ಥಿರವಾಗದ ಹೊರತು ಯೋಗ ಸಾಧ್ಯವಾಗುವುದಿಲ್ಲ. ಯೋಗಿಯ ಮನಸ್ಸು ಆತನ ವಶದಲ್ಲಿರುತ್ತದೆಯೇ ವಿನಾ ಆತ ಅದರ ವಶದಲ್ಲಿರುವುದಿಲ್ಲ. ಮನಸ್ಸು ಸ್ಥಿರವಾಯಿತು ಎಂದರೆ, ವಾಯು ಸ್ಥಿರವಾಗುತ್ತದೆ – ಕುಂಭಕವಾಗುತ್ತದೆ.

❁ ಮನಸ್ಸು ಹಾಲು ಇದ್ದ ಹಾಗೆ. ಅದನ್ನು ಸಂಸಾರವೆಂಬ ನೀರಿಗೆ ಸುರಿದರೆ ಅದು ಅದರೊಡನೆ ಬೆರೆತುಕೊಂಡುಬಿಡುತ್ತದೆ. ಜನ ಹಾಲನ್ನು ನಿರ್ಜನಪ್ರದೇಶದಲ್ಲಿ ಇಟ್ಟು ಹೆಪ್ಪುಹಾಕಿ ಮೊಸರು ಮಾಡಿ ಕಡೆದು ಬೆಣ್ಣೆ ತೆಗೆಯುತ್ತಾರೆ. ಹಾಗೇನೇ ನಿರ್ಜನಪ್ರದೇಶದಲ್ಲಿ ಸಾಧನೆಮಾಡಿ ಮನಸ್ಸೆಂಬ ಹಾಲಿನಿಂದ ಜ್ಞಾನ-ಭಕ್ತಿಗಳೆಂಬ ಬೆಣ್ಣೆಯನ್ನು ತೆಗೆಯುವುದಾದರೆ, ಬಳಿಕ ಆ ಬೆಣ್ಣೆಯನ್ನು ಅನಾಯಾಸವಾಗಿ ಸಂಸಾರವೆಂಬ ನೀರಿನಲ್ಲಿ ಇಡಬಹುದು. ಆಗ ಅದು ಎಂದಿಗೂ ಸಂಸಾರವೆಂಬ ನೀರಿನಲ್ಲಿ ಬೆರೆತುಹೋಗುವುದಿಲ್ಲ.

ಶ್ರೀರಾಮಕೃಷ್ಣ ವಚನವೇದದಿಂದ

# ಶ್ರೀಮಾತೆ

ಮೂಲ ಬಂಗಾಳಿ : **ಆಶುತೋಷ್ ಮಿತ್ರ** ಅನುವಾದ : **ಸ್ವಾಮಿ ಜ್ಞಾನಯೋಗಾನಂದ**



ಬಂಗಾಳಿ ಭಾಷೆಯಲ್ಲಿ ಶ್ರೀಮಾತೆಯವರ ಜೀವನ, ಸ್ಮೃತಿಕಥೆ ಹಾಗೂ ಇತರ ಬರಹಗಳು ವಿಪುಲವಾಗಿ ಪ್ರಕಟವಾಗಿವೆ. ಅವುಗಳಲ್ಲಿ ಕೆಲವು ಕೃತಿಗಳು ಮಾತ್ರ ಆಂಗ್ಲ ಭಾಷೆಗೆ ಅನುವಾದಗೊಂಡಿವೆ. ಇತರ ಭಾರತೀಯ ಭಾಷೆಗೆ ಅನುವಾದಗೊಂಡಿರುವ ಕೃತಿಗಳು ಅತ್ಯಲ್ಪವೆನ್ನಬಹುದು. ಶ್ರೀಮಾತೆಯವರನ್ನು ಕುರಿತಂತೆ ಅವರ ಶಿಷ್ಯರು ಹಾಗೂ ಅವರನ್ನು ನಿಕಟವಾಗಿ ಬಲ್ಲ ಸಂನ್ಯಾಸಿ ವೃಂದದವರು, ಇತರ ಒಡನಾಡಿಗಳು, ಭಕ್ತರು ಬರೆದ ಅನೇಕ ಸ್ಮೃತಿಚಿತ್ರಗಳನ್ನು ಸಂಗ್ರಹಿಸಿ, ರಾಮಕೃಷ್ಣ ಮಹಾಸಂಘದ ಪ್ರಮುಖ ಬಂಗಾಳಿ ಪ್ರಕಟಣೆಯ ಕೇಂದ್ರವಾದ ಉದ್ಬೋಧನ ಕಾರ್ಯಾಲಯವು **'ಶ್ರೀ ಶ್ರೀ ಮಾಯೇರ್ ಪದಪ್ರಾಂತೇ'** ಎಂಬ ಗ್ರಂಥವನ್ನು ನಾಲ್ಕು ಸಂಪುಟಗಳಲ್ಲಿ ಪ್ರಕಟಿಸಿದೆ. ಎರಡನೇ ಸಂಪುಟದಲ್ಲಿ ಬರುವ ಶ್ರೀ ಆಶುತೋಷ ಮಿತ್ರ ಅವರ **'ಶ್ರೀ ಮಾ'***
(ಇದನ್ನೊಂದು ಪ್ರತ್ಯೇಕ ಗ್ರಂಥವೆಂದೇ ಪರಿಗಣಿಸಬೇಕು) ಎಂಬ ದೀರ್ಘ ಬರಹ ಅತ್ಯಂತ ಮುಖ್ಯವಾದ ವಿವರಗಳನ್ನೊಳಗೊಂಡಿದೆ; ಇದು ಶ್ರೀಮಾತೆಯವರನ್ನು ಕುರಿತು ಅತ್ಯಂತ ಸುಂದರವಾದ ಚಿತ್ರಣವನ್ನು ನೀಡುತ್ತದೆ. ಇದರ ಕನ್ನಡಾನುವಾದ ಈ ಸಂಚಿಕೆಯಿಂದ ಹೊಸ ಧಾರಾವಾಹಿಯಾಗಿ ಹರಿದು ಬರಲಿದೆ. ಮೂಲ ಕೃತಿಯಲ್ಲಿ ಬರುವ ಅನೇಕ ಅಡಿಟಿಪ್ಪಣಿಗಳೊಂದಿಗೆ, ಕನ್ನಡ ಓದುಗರಿಗೆ ಅಗತ್ಯವೆನಿಸಬಹುದಾದ ಹೊಸ ವಿವರಣೆಗಳನ್ನೂ ಅಲ್ಲಲ್ಲಿ ನೀಡಲಾಗುವುದು. ಮೂಲ ಗ್ರಂಥದಲ್ಲಿ ಶ್ರೀ ಆಶುತೋಷ ಮಿತ್ರ ನೀಡಿದ ಅಡಿಟಿಪ್ಪಣಿಗಳ ಕೊನೆಯಲ್ಲಿ ಯಾವ ಸೂಚನೆಯನ್ನೂ ಸೇರಿಸಿಲ್ಲ; ಉದ್ಬೋಧನ ಕಾರ್ಯಾಲಯದ ಪ್ರಕಟಣೆಗೆ ಅದರ ಸಂಪಾದಕರಾದ ಸ್ವಾಮಿ ಪೂರ್ಣಾತ್ಮಾನಂದರು ನೀಡಿರುವ ಹೊಸ ಅಡಿಟಿಪ್ಪಣಿಗಳ ಮುಂದೆ *(-ಸಂ)* ಎಂದೂ, ಕನ್ನಡಾನುವಾದದಲ್ಲಿ ಹೊಸತಾಗಿ ನೀಡಲಾಗುವ ಅಡಿಟಿಪ್ಪಣಿಗಳ ಮುಂದೆ *(-ಅನು)* ಎಂದೂ ಸೇರಿಸಲಾಗಿದೆ.

## ಭಾಗ ೧

ಕ್ರಿ.ಶ. ೧೯೦೮ನೇ ಇಸವಿಯ ಏಪ್ರಿಲ್ ೨೨ ಶುಕ್ರವಾರದಂದು ನಡೆದ ಸಂಗತಿ ಇದು. ಶಾರದಾ ಮಹಾರಾಜರೊಂದಿಗೆ (ಸ್ವಾಮಿ ತ್ರಿಗುಣಾತೀತಾನಂದರು) ನಾನು ಸುಮಾರು ಎರಡೂವರೆ ಗಂಟೆಯ ಹೊತ್ತಿಗೆ ೧೦/೨ ಬೋಸ್‌ಪಾರಾ ಲೇನ್ ಕಡೆಗೆ ('ಶ್ರೀಮಾತೆಯವರ ಮನೆ' ಎಂದೇ ಪ್ರಸಿದ್ಧವಾದ 'ಉದ್ಬೋಧನ') ಹೋದೆ. ಆಗ ನನಗೆ ಅದು ಯಾರ ಮನೆ, ಅಲ್ಲಿ ಯಾರು ವಾಸವಾಗಿದ್ದಾರೆ, ಅಲ್ಲಿಗೆ ನಾವೇಕೆ ಹೋಗುತ್ತಿದ್ದೇವೆ ಇತ್ಯಾದಿ ಏನೂ ಗೊತ್ತಿರಲಿಲ್ಲ. ಮನೆಯ ಕೆಳ ಅಂತಸ್ತಿನಲ್ಲಿ ಮೊದಲು ಪೂರ್ವ-ಪಶ್ಚಿಮ ದಿಕ್ಕುಗಳಲ್ಲಿ ಎರಡು ಕೋಣೆಗಳಿವೆ, ನಡುವೆ ಪ್ರಧಾನ ಬಾಗಿಲು ಇದೆ. ಆ ಬಾಗಿಲಿನಿಂದ ಪ್ರವೇಶಿಸಿದ ನಾನು ದಕ್ಷಿಣ ಭಾಗದಲ್ಲಿದ್ದ ಒಂದು ಕೋಣೆಗೆ ಹೋಗಿ ನೋಡಿದೆ – ಅಲ್ಲೊಬ್ಬರು ಸಾಧುಗಳು ಮಲಗಿದ್ದರು. ಅವರು ನನ್ನ ವಿಷಯವಾಗಿ ಶಾರದಾ

---

* ಈ ಕೃತಿಯು 'ಶ್ರೀ ಮಾ'(ಬಂಗಾಳ ಶೀರ್ಷಿಕೆ) ಎಂಬ ಹೆಸರಿನಲ್ಲಿ ೧೯೪೪ನೇ ಇಸವಿಯ ನವಂಬರ್ ತಿಂಗಳಿನಲ್ಲಿ ಮೊದಲಬಾರಿಗೆ ಗ್ರಂಥರೂಪದಲ್ಲಿ ಪ್ರಕಟವಾಯಿತು. ಪ್ರಕಾಶಕರ ವಿವರ: ಸಂತೋಷ್‌ಕುಮಾರ್ ಘೋಷ್, ೭, ಸರ್ವಖಾನ್ ರೋಡ್, ಪಾಯಿಕ್‌ಪಾಡಾ, ಬೇಲ್‌ಗಾಛಿಯಾ, ಕಲ್ಕತ್ತಾ. ಇಲ್ಲಿಯವರೆಗೆ (ಕ್ರಿ.ಶ. ೧೯೪೮) ಈ ಗ್ರಂಥ ಮರುಮುದ್ರಣ ಕಂಡಿಲ್ಲ. ಗ್ರಂಥದ ಮುನ್ನುಡಿಯಲ್ಲಿ ಲೇಖಕರು ಹೇಳುತ್ತಾರೆ: ''ಇಲ್ಲಿ ಯಾವ ಸಂಗತಿಗಳನ್ನು ಬರೆಯಲಾಗಿದೆಯೋ, ಅವನ್ನೆಲ್ಲ ಲೇಖಕ ಸ್ವತಃ ನೋಡಿದ್ದಾನೆ, ಅಥವಾ ಶ್ರೀಮಾತೆಯವರ ಬಾಯಿಯಿಂದ ಕೇಳಿದ್ದಾನೆ.'' ಶ್ರೀಮಾತೆಯವರ ಮೊದಲ ಜೀವನ ಚರಿತ್ರೆಯನ್ನು ಬರೆದ ಬ್ರಹ್ಮಚಾರಿ ಅಕ್ಷಯಚೈತನ್ಯ ಅವರು ತಮ್ಮ **'ಶ್ರೀ ಶ್ರೀ ಶಾರದಾದೇವಿ'** ಎಂಬ ಗ್ರಂಥಕ್ಕೆ ಆಕರವಾಗಿ ಅನೇಕ ವಿಷಯಗಳನ್ನು ಈ ಲೇಖಕನಿಂದ ಪಡೆದಿದ್ದಾರೆ. ಆಗ ಈ ಕೃತಿ ಪ್ರಕಟವಾಗಿರಲಿಲ್ಲ. ಶ್ರೀಮಾತೆಯವರ ಬೃಹತ್ತಾದ, ಸಮಗ್ರವಾದ ಅಧಿಕೃತ ಗ್ರಂಥ, ಸ್ವಾಮಿ ಗಂಭೀರಾನಂದರ **'ಶ್ರೀ ಮಾ ಶಾರದಾದೇವಿ'** ಯಲ್ಲಿ ಕೂಡ **'ಶ್ರೀ ಮಾ'** ಗ್ರಂಥದ ಅನೇಕ ಸಂಗತಿಗಳನ್ನು ಸ್ವೀಕರಿಸಲಾಗಿದೆ. ಇವಲ್ಲದೆ ಶ್ರೀಮಾತೆಯವರನ್ನು ಕುರಿತ ಜೀವನ ಚರಿತ್ರೆಗಳೆಲ್ಲವೂ **'ಶ್ರೀ ಮಾ'** ಗ್ರಂಥದಿಂದ ಹಲವು ವಿಷಯಗಳನ್ನು ಸಂಗ್ರಹಿಸಿವೆ. ಮೂಲ ಗ್ರಂಥದ ಮೂರು ಅಧ್ಯಾಯಗಳನ್ನು ಇಲ್ಲಿ ಒಟ್ಟು ಸೇರಿಸಲಾಗಿದೆ. *(-ಸಂಪಾದಕ)*

ಮಹಾರಾಜರನ್ನು ಕೇಳಿದರು: ''ಇವನು ನಿನ್ನ ತಮ್ಮನೆ?'' ಅದಕ್ಕೆ ಅವರು, ''ಹೌದು'' ಎಂದರು.[೧] ಆಗ ಆ ಸಾಧುಗಳು, ''ಆದರೆ ಈಗ ಶ್ರೀಮಾತೆ ವಿಶ್ರಾಂತಿ ಪಡೆಯುತ್ತಿದ್ದಾರಲ್ಲ - ಅವರು ಠಾಕೂರರನ್ನು ಎಬ್ಬಿಸುವಾಗ[೨] ಹೇಳುತ್ತೇನೆ'' ಎಂದರು.

ಆದರೆ ಈ 'ಶ್ರೀಮಾತೆ' ಯಾರೆಂದು ನನಗೆ ಸ್ವಲ್ಪವೂ ಅರ್ಥವಾಗಲಿಲ್ಲ. ಅಲ್ಲಿಯವರೆಗೂ ನನಗೆ ಶ್ರೀಮಾತೆಯವರ ವಿಷಯ



'ಶ್ರೀಮಾತೆಯವರ ಮನೆ' ಅಥವಾ ಉದ್ಬೋಧನ ಕಾರ್ಯಾಲಯ, ಒಂದು ಹಳೆಯ ಫೋಟೋ

ಸ್ವಲ್ಪವೂ ಗೊತ್ತಿರಲಿಲ್ಲ. ಅದೇಕೆ, ಅವರು ಶ್ರೀರಾಮಕೃಷ್ಣರಿಗೆ ಏನಾಗಬೇಕು ಎಂಬುದೂ ನನಗೆ ಗೊತ್ತಿರಲಿಲ್ಲ. ಶ್ರೀರಾಮಕೃಷ್ಣರನ್ನು ಕುರಿತು ನಾನು ಒಂದಿಷ್ಟು ಕೇಳಿದ್ದೆ. ಒಂದು ಬಾರಿ ನನ್ನ ಹೆತ್ತ ತಾಯಿ ನನ್ನನ್ನು ಎತ್ತಿಕೊಂಡು (ಆಗ ನನ್ನ ವಯಸ್ಸು ನಾಲ್ಕು ಅಥವಾ ಐದು) ಶ್ಯಾಮಪುಕುರಕ್ಕೆ ಹೋಗಿದ್ದಾಗ ಅವರನ್ನು ನಾನು ಕಂಡಿದ್ದೆ, ಆದರೆ ನನಗದು ನೆನಪಿಲ್ಲ. ಇರಲಿ, ಈ ಸಾಧುಗಳ ಹೆಸರು ಯೋಗಿನ್ ಮಹಾರಾಜ್ (ಸ್ವಾಮಿ ಯೋಗಾನಂದ) ಎಂದು ಅನಂತರ ತಿಳಿದು ಬಂತು. ಅವರ ಸೂಚನೆಯ ಪ್ರಕಾರ ನಾನು ಆ ಕೋಣೆಯ ಒಂದು ಮೂಲೆಯಲ್ಲಿದ್ದ ಒಂದು ಪಾತ್ರೆಯನ್ನು ತೆಗೆದುಕೊಂಡು, ಅದರಲ್ಲಿದ್ದ ಹಾಲನ್ನವನ್ನು ಶಾರದಾ ಮಹಾರಾಜರಿಗೆ ಕೊಟ್ಟೆ, ಹಾಗೂ ಉಳಿದದ್ದನ್ನು ನಾನು ಸೇವಿಸಿದೆ. ಅದು ತುಂಬ ಸಿಹಿಯಾಗಿತ್ತು. ಅದು ಶ್ರೀಮಾತೆಯವರ ಪ್ರಸಾದವೆಂದು ತಿಳಿದೆ. ಪದೇ ಪದೇ 'ಮಾತೆ' ಎಂಬ ಮಾತನ್ನು ಕೇಳಿದಾಗ, ಆಕೆ ಈ ಸಾಧುಗಳ ತಾಯಿ ಇರಬೇಕೆಂದೇ ನಾನು ಭಾವಿಸಿದೆ.

ಸ್ವಲ್ಪ ಹೊತ್ತು ವಿಶ್ರಾಂತಿ ಪಡೆದ ಮೇಲೆ ಸುಮಾರು ನಾಲ್ಕು ಗಂಟೆಯ ಹೊತ್ತಿಗೆ ಮೇಲಂತಸ್ತಿನ ಕೋಣೆಯಲ್ಲಿ ಪಾತ್ರೆಯನ್ನು ನೆಲದ ಮೇಲಿಟ್ಟಂತೆ ಸದ್ದಾಯಿತು; ಆಗ ಯೋಗಿನ್ ಮಹಾರಾಜ್, ''ಈಗ ನೀವು ಹೋಗಿ, ಶ್ರೀಮಾತೆ ಠಾಕೂರರನ್ನು ಎಬ್ಬಿಸಿದ್ದಾರೆ'' ಎಂದರು. ಶಾರದಾ ಮಹಾರಾಜ್ ಹೋಗಲಿಲ್ಲ , ಈ ಲೇಖಕನಿಗೆ ಪಶ್ಚಿಮ ಭಾಗದ ಕೋಣೆಯ ಉತ್ತರ ಭಾಗದಲ್ಲಿದ್ದ ಮೆಟ್ಟಿಲನ್ನು ತೋರಿಸಿ, ಮೇಲಂತಸ್ತಿಗೆ ಹೋಗಲು ಹೇಳಿದರು. ಅವರ ನಿರ್ದೇಶನದ ಪ್ರಕಾರ ಮೇಲಕ್ಕೆ ಹೋದ ನಾನು, ಅಲ್ಲಿ ಮೊದಲ, ಅಂದರೆ ಪಶ್ಚಿಮಭಾಗದ ಕೋಣೆಯಲ್ಲಿ ಯಾರೂ ಕಾಣಿಸದ್ದರಿಂದ, ಪೂರ್ವ ಭಾಗದ ಕೋಣೆಯತ್ತ ಹೋದೆ; ಆ ಕೋಣೆಯಲ್ಲಿ ಒಬ್ಬಾಕೆ ಮಹಿಳೆ ಕುಳಿತಿದ್ದರು. ಆಕೆ ನನ್ನನ್ನು ಕಂಡೊಡನೆಯೇ ತನ್ನತ್ತ ಕರೆದು, ''ನೀನು ಶಾರದನ ತಮ್ಮನಲ್ಲವೆ? ಬೇಲೂರು ಮಠಕ್ಕೆ ಹೋಗುತ್ತೀಯಾ? ಒಳ್ಳೆಯದು. ಸ್ವಲ್ಪ ಸಿಹಿ ತಿಂಡಿ ತಿನ್ನು'' ಎಂದರು. ಎರಡು ಎಳ್ಳುಂಡೆ ಕೊಟ್ಟರು, ಅನಂತರ ನೀರು ಕೊಟ್ಟರು. ಅದನ್ನೇ ಸೇವಿಸಿ ನಾನು ಮರಳುವುದರಲ್ಲಿದ್ದೆ. ಅಷ್ಟರಲ್ಲಿ ಅವರು ನನ್ನನ್ನು ಕರೆದು, ''ಪ್ರಣಾಮ ಮಾಡಲಿಲ್ಲವಲ್ಲ?'' ಎಂದರು. ನಾನು ಗೊಂದಲಕ್ಕೊಳಗಾಗಿ ಅವರಿಗೆ ಪ್ರಣಾಮ ಮಾಡಲು ಮುಂದಾದರೆ, ಅವರು ಮೊದಲು ಠಾಕೂರರಿಗೆ (ಶ್ರೀರಾಮಕೃಷ್ಣರ ಚಿತ್ರಪಟಕ್ಕೆ) ನಮಸ್ಕಾರ ಮಾಡಲು ಹೇಳಿದರು. ನಾನು ಮೊದಲು ಠಾಕೂರರಿಗೆ, ಅನಂತರ


ಉದ್ಬೋಧನ, ಒಂದನೇ ಮಹಡಿ

೧. ಲೇಖಕ ಸ್ವಾಮಿ ತ್ರಿಗುಣಾತೀತಾನಂದರ (ಪೂರ್ವಾಶ್ರಮದ ಹೆಸರು – ಶಾರದಾಪ್ರಸನ್ನ ಮಿತ್ರ) ಸ್ವಂತ ತಮ್ಮ. ಅವರು ಶ್ರೀರಾಮಕೃಷ್ಣ ಮಹಾಸಂಘವನ್ನು ಸೇರಿದ್ದರು. ಸಂನ್ಯಾಸವಾದ ಮೇಲೆ ಅವರ ಹೆಸರು 'ಸ್ವಾಮಿ ಸತ್ಯಕಾಮಾನಂದ' ಎಂದಾಗಿತ್ತು. ಮಹಾಸಂಘದಲ್ಲಿದ್ದಾಗ ಅವರಿಗೆ ಶ್ರೀಮಾತೆ, ಸ್ವಾಮಿ ವಿವೇಕಾನಂದರು, ಸ್ವಾಮಿ ಬ್ರಹ್ಮಾನಂದರೇ ಮೊದಲಾದ ಶ್ರೀರಾಮಕೃಷ್ಣರ ನೇರ ಶಿಷ್ಯರ ನಿಕಟ ಸಂಪರ್ಕವುಂಟಾಗಿತ್ತು. ಅವರಿಗೆ ದೀರ್ಘಕಾಲ (೧೩ ವರ್ಷ) ಶ್ರೀಮಾತೆಯವರ ಸೇವೆ ಮಾಡುವ ಸೌಭಾಗ್ಯವೂ ಒದಗಿ ಬಂದಿತ್ತು. ಶ್ರೀಮಾತೆ ಪ್ರೀತಿಯಿಂದ ಅವರನ್ನು 'ನನ್ನ ಕಾರ್ತಿಕ' ಎಂದು ಕರೆಯುತ್ತಿದ್ದರು. ಮುಂದೆ ದೌರ್ಭಾಗ್ಯವಶಾತ್ ಅವರು ಮಹಾಸಂಘವನ್ನು ತ್ಯಜಿಸಬೇಕಾಗಿ ಬಂತು. *(-ಸಂ)*

೨. ಠಾಕೂರರು ಎಂದರೆ ಯಾವುದೇ ದೇವರನ್ನು ಭಕ್ತಿಪೂರ್ವಕ ಕರೆಯುವ ಹೆಸರು. ಸಾಮಾನ್ಯವಾಗಿ ಶ್ರೀರಾಮಕೃಷ್ಣರಿಗೆ 'ಠಾಕೂರರು' ಎಂದೇ ಕರೆಯುತ್ತಿದ್ದರು. ಶ್ರೀಮಾತೆಯವರು ಶ್ರೀರಾಮಕೃಷ್ಣರನ್ನು ಯಾವಾಗಲೂ ಹಾಗೆ ಕರೆಯುತ್ತಿದ್ದರು. ಶ್ರೀರಾಮಕೃಷ್ಣರ ಚಿತ್ರಪಟವನ್ನು ಪೂಜಿಸುವಾಗ ಮಧ್ಯಾಹ್ನ ವಿಶ್ರಾಂತಿಗೆಂದು ಮಲಗಿಸುತ್ತಾರೆ; ವಿಶ್ರಾಂತಿಯ ನಂತರ ಚಿತ್ರಪಟವನ್ನು ನೇರವಾಗಿ ಇರಿಸಿ 'ಎಬ್ಬಿಸು'ತ್ತಾರೆ. ಶ್ರೀರಾಮಕೃಷ್ಣರು (ಚಿತ್ರಪಟದಲ್ಲೂ) ಜೀವಂತವಾಗಿದ್ದಾರೆ ಎಂಬ ಭಾವದಿಂದಲೇ ಇವನ್ನೆಲ್ಲ ಮಾಡಲಾಗುತ್ತದೆ. *(-ಅನುವಾದಕ)*

ಅವರಿಗೆ ಪ್ರಣಾಮ ಮಾಡಿದೆ. ಅವರು ನನ್ನ ಗಲ್ಲವನ್ನು ಸ್ಪರ್ಶಿಸಿ ಚುಂಬಿಸಿದರು.[೩]

ಬೇಲೂರು ಮಠಕ್ಕೆ ಹೋಗುವ ದಾರಿಯಲ್ಲಿ ಶಾರದಾ ಮಹಾರಾಜರನ್ನು ಶ್ರೀಮಾತೆಯವರ ಬಗ್ಗೆ ಕೇಳಿದಾಗ ಅವರು ಹೇಳಿದರು, ಅವರೇ 'ಶ್ರೀಮಾತೆ' ಎಂದು. ಮತ್ತೆ ಅವರನ್ನು ಕೇಳಿದೆ, ''ನಾನು ನಿಮ್ಮ ತಮ್ಮ ಅಂತ ಅವರಿಗೆ ನೀವಾಗಿಯೇ ತಿಳಿಸಿದ್ದೀರಾ, ಅಥವಾ ಇನ್ನು ಯಾರ ಮೂಲಕವಾದರೂ ತಿಳಿಸಿದ್ದೀರಾ?'' ಅದಕ್ಕೆ ಅವರು ''ಇಲ್ಲ'' ಎಂದರು.

ಹೀಗೆ ಶ್ರೀಮಾತೆಯವರ ಪರಿಚಯ ಮಾಡಿಕೊಂಡ ನಂತರ, ಎರಡನೇ ಬಾರಿ ಅವರ ದರ್ಶನ ಪಡೆದ ದಿನ ನನ್ನ ಪಾಲಿಗೆ ಅತ್ಯಂತ ಸ್ಮರಣಾರ್ಹ ದಿನವೆನ್ನಬೇಕು. ಅದು ೧೮೯೮ರ ಮೇ ೧೫ರಂದು, ಭಾನುವಾರ. ಪ್ರಾತಃಕಾಲದಲ್ಲಿ ಎದ್ದು ಶ್ರೀಮಾತೆಯವರ ಪೂಜೆಗಾಗಿ ಬೇಲೂರು ಮಠದಿಂದ ಹೂಗಳನ್ನು ಸಂಗ್ರಹಿಸಿ, ಅವರ ಬಳಿಗೆ ತೆಗೆದುಕೊಂಡು ಹೋಗಿದ್ದೆ. ಕೆಳ ಅಂತಸ್ತಿನಲ್ಲಿ ಯೋಗಿನ್ ಮಹಾರಾಜರು ಇದ್ದರು. ಅವರೆಂದರು: ''ನೀನಿನ್ನೂ ಹುಡುಗ – ನೇರ ಮೇಲಂತಸ್ತಿಗೆ ಹೋಗಿಬಿಡು.'' (ಆಗ ನನಗೆ ಹದಿನೆಂಟು ವರ್ಷ ವಯಸ್ಸು). ಶ್ರೀಮಾತೆಯವರು ಆಗತಾನೇ ಪೂಜೆ ಮಾಡುವ ಆಸನದಲ್ಲಿ ಕುಳಿತಿದ್ದರು. ಅವರು ಹೂಗಳನ್ನು ಸ್ವೀಕರಿಸಿ, ತಮ್ಮ ಪಕ್ಕದಲ್ಲಿದ್ದ ಇನ್ನೊಂದು ಆಸನದಲ್ಲಿ ಕುಳಿತುಕೊಳ್ಳಲು ನನಗೆ ಹೇಳಿದರು. ಬಳಿಕ, ''ಮೊದಲು ಪೂಜೆ ಮಾಡಿ ಮುಗಿಸುತ್ತೇನೆ'' ಎಂದರು.

ಸುಮಾರು ಅರ್ಧಗಂಟೆಯಾದ ಮೇಲೆ ಪೂಜೆ ಮುಗಿಯಿತು. ಅವರು ನನ್ನತ್ತ ತಿರುಗಿ ಹೇಳಿದರು, ''ಮಂತ್ರ(ದೀಕ್ಷೆ) ತೆಗೆದುಕೊಳ್ಳುತ್ತೀಯಾ?'' ನಾನು ಆಶ್ಚರ್ಯಚಕಿತನಾದೆ. ಮನಸ್ಸಿನಲ್ಲಿ ಆಲೋಚನೆ ಏನೇ ಇದ್ದಿರಲಿ, ಅದನ್ನು ನಾನು ಮಾತಿನ ಮೂಲಕ ಹೇಳಿರಲಿಲ್ಲ. ಅವರು ನನ್ನ ಮನಸ್ಸನ್ನು ಅದು ಹೇಗೆ ಅರಿತುಕೊಂಡರು? ಅದೇನೇ ಇರಲಿ, ಅವರು ನನಗೆ ತಮ್ಮ ಪಾದಕಮಲಗಳಲ್ಲಿ ಒಂದು ಸ್ಥಾನವಿತ್ತರು. ಪಕ್ಕದಲ್ಲೇ ಒಂದು ಚೆನ್ನಾಗಿ ಮಾಗಿದ ಹಣ್ಣು ಇತ್ತು. ಅದರತ್ತ ಕೈ ತೋರಿಸಿ, ''ಅದನ್ನು ನನಗೆ ಕೊಡು. ಅದನ್ನು ಕೊಡಬೇಕು, ಮಗೂ'' ಎಂದರು. ಅವರದೇ ವಸ್ತು; ಅದನ್ನೇ ಅವರಿಗೆ ದಕ್ಷಿಣೆಯಾಗಿ ಕೊಟ್ಟೆ.

ಆ ಸಂದರ್ಭದಲ್ಲೇ ಶ್ರೀಮಾತೆಯವರ ಬಳಿಗೆ ಆಗಾಗ ಹೋಗಿ ಬರತೊಡಗಿದೆ. ಒಂದು ದಿನ ಬೆಳಿಗ್ಗೆ ಎಂಟು ಗಂಟೆಯ ಹೊತ್ತಿಗೆ ಯೋಗಿನ್ ಮಹಾರಾಜ್ ಹಾಗೂ ಕೃಷ್ಣಲಾಲ್ (ಮುಂದೆ ಸ್ವಾಮಿ ಧೀರಾನಂದರು) ಶ್ರೀಮಾತೆಯವರನ್ನು ಬೇಲೂರು ಮಠಕ್ಕೆ ಕರೆದುಕೊಂಡು ಬಂದರು. ಅವರೊಂದಿಗೆ ಗೋಲಾಪ್ ಮಾ (ಶ್ರೀರಾಮಕೃಷ್ಣರ ಹಾಗೂ ಶ್ರೀಮಾತೆಯವರ ಒಬ್ಬ ಭಕ್ತೆ) ಕೂಡ ಅವರೊಂದಿಗಿದ್ದರು. ಆಗ ಬೇಲೂರು ಮಠವಿದ್ದುದು ನೀಲಾಂಬರ ಮುಖ್ಯೋ

೩. ಚಿಕ್ಕಮಕ್ಕಳ ಗಲ್ಲವನ್ನು ಮುಟ್ಟಿ ದೂರದಿಂದ ಚುಂಬಿಸುವ ರೀತಿ, ಶ್ರೀಮಾತೆಯವರು ಎಳೆಯರಿಗೆ ಮಾಡುತ್ತಿದ್ದರು. *(-ಅನು)*



ನೀಲಾಂಬರ ಬಾಬು ಮುಖ್ಯೋಪಾಧ್ಯಾಯನ ಉದ್ಯಾನ ಮನೆ

ಪಾಧ್ಯಾಯನ ಉದ್ಯಾನದ ಮನೆಯಲ್ಲಿ. ಶ್ರೀಮಾತೆ ನೌಕೆಯಿಂದ ಇಳಿಯುತ್ತಿದ್ದಂತೆಯೇ ಮಠದಲ್ಲಿ ಶಂಖ ಊದತೊಡಗಿದರು. ಶ್ರೀಮಾತೆಯವರು ಇಳಿದು ಬಂದಾಗ ಅವರ ಪಾದಗಳನ್ನು ತೊಳೆದು, ಅವರನ್ನು ಮನೆಯ ವರಾಂಡಕ್ಕೆ ಕರೆದುಕೊಂಡು ಬಂದರು. ಅವರಿಗೆ ಗಾಳಿ ಬೀಸತೊಡಗಿದೆವು. ಆಗ ಬೇಸಿಗೆ ಕಾಲ, ವಿಪರೀತ ಸೆಖೆ. ನಂದಲಾಲ ನೈವೇದ್ಯಕ್ಕೆ ಅಣಿಗೊಳಿಸಿದ. ಸುಶೀಲ ಮಹಾರಾಜರೊಂದಿಗೆ (ಸ್ವಾಮಿ ಪ್ರಕಾಶಾನಂದ) ನಾನು ಶ್ರೀಮಾತೆಯವರ ಸೇವೆಗೆ ನಿಂತೆ. ಬೇಲೂರು ಮಠದ ಹಿರಿಯವರು ಹಾಗೂ ಕಿರಿಯವರೆಲ್ಲರೂ ಒಬ್ಬೊಬ್ಬರಾಗಿ ಶ್ರೀಮಾತೆಗೆ ಪ್ರಣಾಮ ಮಾಡಿ ಹೋದರು. ತಮ್ಮ ವಿಶ್ರಾಂತಿ ಮುಗಿದ ಮೇಲೆ ಶ್ರೀಮಾತೆಯವರು ಪೂಜೆ ಮಾಡಲು ದೇವರ ಕೋಣೆಯನ್ನು ಪ್ರವೇಶಿಸಿದರು. ಮೊದಲೇ ಪೂಜೆಗಾಗಿ ಎಲ್ಲವನ್ನೂ ಅಣಿಗೊಳಿಸಲಾಗಿತ್ತು. ಪೂಜೆ ಮುಗಿದ ಮೇಲೆ ಅವರು ತಮ್ಮ ಶಿಷ್ಯಂದಿರಿಗೆ ಫಲಾಹಾರ ನೀಡಲು ಆದೇಶ ನೀಡಿದರು. ನಂದಲಾಲ್ ಶ್ರೀಮಾತೆ ಹಾಗೂ ಗೋಲಾಪ್ ಮಾಗೆ ಕಲ್ಲುಸಕ್ಕರೆಯ ಪಾನೀಯ ಹಾಗೂ ಶ್ರೀರಾಮಕೃಷ್ಣರ ಪ್ರಸಾದದ ಹಣ್ಣುಹಂಪಲು ಇವನ್ನು ನೀಡಿ, ಉಳಿದವನ್ನೆಲ್ಲ ಅಡುಗೆ ಮನೆಗೆ ತೆಗೆದುಕೊಂಡು ಹೋದ. ನಮ್ಮಿಬ್ಬರಲ್ಲಿ ಒಬ್ಬ ಶ್ರೀಮಾತೆಯವರಿಗೆ ಮುಖ ತೊಳೆಯುವ ನೀರಿನ ವ್ಯವಸ್ಥೆ ಮಾಡಿದರೆ, ಇನ್ನೊಬ್ಬ ಅವರಿಗೆ ಗಾಳಿ ಬೀಸತೊಡಗಿದೆವು. ಶ್ರೀಮಾತೆ ಫಲಾಹಾರ ಮಾಡುತ್ತ ನಮಗಿಬ್ಬರಿಗೂ ಪ್ರಸಾದ ನೀಡಿದರು. ಇಬ್ಬರೂ ಅದನ್ನು ಪಡೆದು ಕೃತಾರ್ಥರಾದೆವು.

ಅನಂತರ ನೈವೇದ್ಯ ತಯಾರಾದಾಗ, ಶ್ರೀಮಾತೆ ಶ್ರೀರಾಮಕೃಷ್ಣರಿಗೆ ಸಮರ್ಪಿಸಿ, ಅವರನ್ನು(ಭಾವಚಿತ್ರ) ಮಲಗಿಸಿದರು. ಶ್ರೀಮಾತೆಯವರ ಹಾಗೂ ಗೋಲಾಪ್ ಮಾ ಅವರ ಊಟದ ವ್ಯವಸ್ಥೆಯನ್ನು ನಂದಲಾಲ್ ಪ್ರಾಂಗಣದಲ್ಲಿ ಮಾಡಿದ. ಶ್ರೀಮಾತೆ ಊಟಕ್ಕೆ ಕುಳಿತ ಮೇಲೆ ಮೊದಲಿಗೆ ಅನ್ನ, ಹಾಲು ಇವನ್ನು ಕಲಸಿದರು. ಅದರೊಂದಿಗೆ ತೆಂಗಿನ ಹಾಲು, ಹಣ್ಣು ಹಾಗೂ ಸಕ್ಕರೆ ಇವನ್ನು ಮಿಶ್ರಗೊಳಿಸಿದರು. ಅವರ ಉದ್ದೇಶವೇನೆಂದು ಅರಿತು, ಯಾರೋ ನಂದಲಾಲ್‌ಗೆ ಒಂದು ಖಾಲಿ ತಟ್ಟೆಯನ್ನು ತರಹೇಳಿದರು. ಅವನು ತಟ್ಟೆ ತಂದಾಗ ಅದಕ್ಕೆ ಶ್ರೀಮಾತೆಯವರ ಶಿಷ್ಯರಿಗೆ

ಪ್ರಸಾದ ನೀಡಲು ಸ್ವಲ್ಪ ಭಾಗವನ್ನು ಹಾಕಲು ಹಾಗೂ ಶ್ರೀಮಾತೆಯವರಿಗಾಗಿ ಇಟ್ಟಿದ್ದ ಇನ್ನೊಂದು ತಟ್ಟೆಗೆ ಉಳಿದ ಭಾಗವನ್ನು ಹಾಕಲು ವಿನಂತಿಸಿಕೊಂಡರು. ಮೊದಲು ಶ್ರೀಮಾತೆಯವರು ಅದಕ್ಕೆ ಸಮ್ಮತಿ ನೀಡಲಿಲ್ಲ; ಬಹಳ ಒತ್ತಾಯಿಸಿದ ನಂತರ ಅವರು ತಮಗಾಗಿ ಒಂದಿಷ್ಟನ್ನು ಇಟ್ಟುಕೊಂಡು ಉಳಿದದ್ದನ್ನೆಲ್ಲ ಕಳುಹಿಸಿಕೊಟ್ಟರು. ಊಟ ಮಾಡುವಾಗ ಅವರು ಮಾತುಕತೆಗೆ ತೊಡಗಿದರು. ಯಾರು ಎಲ್ಲಿ ವಾಸ ಮಾಡುತ್ತಾರೆ, ಅವರು ಏನು ಊಟ ಮಾಡುತ್ತಾರೆ, ಎಲ್ಲಿ ಯಾರು ಮಲಗುತ್ತಾರೆ, ಶ್ರೀರಾಮಕೃಷ್ಣರ ಪೂಜೆ ಯಾರು ಮಾಡುತ್ತಾರೆ – ಹೀಗೆ ಮಾತುಕತೆ ನಡೆಯಿತು.

ಊಟ ಮುಗಿದ ಮೇಲೆ ಒಂದು ಚಾಪೆಯನ್ನು ಹರಡಲಾಯಿತು. ಶ್ರೀಮಾತೆ ತುಸು ಒರಗಿದಂತೆ ಮಲಗಿ ವಿಶ್ರಾಂತಿ ಪಡೆದರು. ಗೋಲಾಪ್ ಮಾ ನೆಲದಲ್ಲೇ ಮಲಗಿ, ಗೊರಕೆ ಹೊಡೆಯ ತೊಡಗಿದಳು. ನಾವಿಬ್ಬರೂ ಒಬ್ಬೊಬ್ಬರಾಗಿ ಊಟ ಮಾಡಿಕೊಂಡು ಬಂದೆವು. ಸಂಜೆ ನಾಲ್ಕು ಗಂಟೆಗೆ ಶ್ರೀಮಾತೆ ಶ್ರೀರಾಮಕೃಷ್ಣರನ್ನು ಎಬ್ಬಿಸಿದರು. ಸ್ವಲ್ಪ ಫಲಾಹಾರವಾದ ಬಳಿಕ ಅವರೆಲ್ಲ ಮರಳಿ ಹೋಗಲು ಸಿದ್ಧತೆ ಮಾಡತೊಡಗಿದರು. ಬೇಲೂರು ಮಠದ ಪ್ರತಿಯೊಬ್ಬರೂ ಬಂದು, ಒಬ್ಬೊಬ್ಬರಾಗಿ ಪ್ರಣಾಮ ಮಾಡಿದರು.

ಶ್ರೀಮಾತೆ ದೋಣಿಯನ್ನು ಏರಲು ಮುಂದಾದರು. ಅವರೊಂದಿಗೆ ಗೋಲಾಪ್ ಮಾ, ಯೋಗಿನ್ ಮಹಾರಾಜ್ ಹಾಗೂ ಕೃಷ್ಣಲಾಲ್ ಹೋಗುವವರಿದ್ದರು. ಶ್ರೀಮಾತೆ ಇನ್ನೇನು, ಹೊರಟೇ ಬಿಟ್ಟಿದ್ದಾರೆ, ಅಷ್ಟರಲ್ಲಿ ರಾಖಾಲ್ ಮಹಾರಾಜರ (ಸ್ವಾಮಿ ಬ್ರಹ್ಮಾನಂದರ) ಪ್ರಾರ್ಥನೆಯನ್ನು ಹೊತ್ತು ತಂದ ಕೃಷ್ಣಲಾಲ್ ಮಹಾರಾಜ್ ಅದನ್ನು ಹೀಗೆ ತಿಳಿಸಿದರು: ''ಅಮ್ಮಾ, ಹೊರಡುವ ಮುನ್ನ ನೀವು ಒಂದು ಬಾರಿ ಬೇಲೂರು ಮಠದ ಹೊಸ ಜಾಗಕ್ಕೆ ಬಂದು, ತಮ್ಮ ಪಾದದಿಂದ ಸ್ಪರ್ಶಿಸಿ ಹೋಗಬೇಕು.'' ಶ್ರೀಮಾತೆ ಅಲ್ಲಿಗೆ ದೋಣಿಯಲ್ಲೇ ಹೋಗುವುದಾಗಿ ನಿಶ್ಚಯವಾಯಿತು. ಯೋಗಿನ್ ಮಹಾರಾಜ್ ಅಲ್ಲಿಗೆ ನಡೆದೇ ಹೋದರು. ದೋಣಿಯಲ್ಲಿ ಶ್ರೀಮಾತೆ, ಗೋಲಾಪ್ ಮಾ, ಕೃಷ್ಣಲಾಲ್, ಸುಶೀಲ್ ಹಾಗೂ ನಾನು ಹೋದೆವು. ಶ್ರೀಮಾತೆ ಹೊಸ ಜಾಗದಲ್ಲೆಲ್ಲ ಸುತ್ತಾಡಿ ನೋಡಿದರು. ಸೋದರಿ ನಿವೇದಿತಾ, ಶ್ರೀಮತಿ ಬುಲ್, ಮಿಸ್ ಮ್ಯಾಕ್ಲಿಯಾಡ್ ಆಗ ಅಲ್ಲೇ ತಂಗಿದ್ದರು. ಶ್ರೀಮಾತೆ ಬಂದಿರುವ ವಿಚಾರವನ್ನು ತಿಳಿದ ಅವರು ಅಲ್ಲಿಗೆ ಬಂದರು. ಶ್ರೀಮಾತೆಯವರನ್ನು ಹೊಸ ಜಾಗದಲ್ಲಿ ಎಲ್ಲೆಡೆ ಕರೆದೊಯ್ದು, ಎಲ್ಲವನ್ನೂ ತೋರಿಸಿದರು. ಜಮೀನನ್ನು ನೋಡಿ ಆನಂದಗೊಂಡ ಶ್ರೀಮಾತೆ ಹೇಳಿದರು, ''ಕೊನೆಗೂ ಈ ಹುಡುಗರ ತಲೆಯ ಮೇಲೊಂದು ಸೂರು ಮಾಡಲು ಜಾಗ ದೊರಕಿತಲ್ಲ! ಪಾಪ, ಇಂದು ಇಲ್ಲಿ, ನಾಳೆ ಇನ್ನೆಲ್ಲೋ ಎಂದು ಅವರು ಅಲೆದಾಡುತ್ತಿದ್ದರು. ಇಷ್ಟು ದಿನವಾದ ಮೇಲೆ ಠಾಕುರ್ ಕಣ್ಣು ಬಿಟ್ಟು ನೋಡಿದರು !''

ಶ್ರೀಮಾತೆ ದೋಣಿಯನ್ನೇರಿದರು. ಸುಶೀಲ್ ಮತ್ತು ನಾನು ಅಲ್ಲೇ ಉಳಿದೆವು; ನಡೆದೇ ಬೇಲೂರು ಮಠಕ್ಕೆ ಮರಳಿದೆವು. ಶ್ರೀಮಾತೆ ನಮ್ಮ ಮನಸ್ಸನ್ನರಿತು, ನಮ್ಮನ್ನು ಕರೆದು ಹೇಳಿದರು, ''ಚಿಂತೆ ಮಾಡಬೇಡಿ – ನಾನಂತೂ ಇದ್ದೇನಲ್ಲ; ದುಃಖವಾದರೆ ನಡುನಡುವೆ ಬಂದು ಭೇಟಿಯಾಗುವಿರಂತೆ.''

ಮಧ್ಯಾಹ್ನ ಊಟ ಮಾಡಿದ ಮೇಲೆ ಶ್ರೀಮಾತೆ ಅರ್ಧ ಒರಗಿಕೊಂಡೇ ವಿಶ್ರಮಿಸಿಕೊಂಡು ಮಾತುಕತೆ ನಡೆಸಿದರು ಎಂದು ಈಗಾಗಲೇ ಹೇಳಿದೆ. ಆಗ ನಡೆದ ಮಾತುಕತೆಯಲ್ಲಿ ಪ್ರಕಟಪಡಿಸಬಹುದಾದ ಕೆಲವನ್ನು ಇಲ್ಲಿ ನೀಡುತ್ತೇನೆ:

ಶ್ರೀಮಾತೆ ಹೇಳಿದರು: ''ನಾನು ಈ ಮನೆಯಲ್ಲಿದ್ದಾಗ ಶಾರದ ನನ್ನ ಬಳಿ ಇರುತ್ತಿದ್ದ. ಅವನು ಏನು ಮಾಡುತ್ತಿದ್ದ, ಗೊತ್ತೆ?'' ಅದನ್ನು ಕೇಳಲು ನಾವು ಕಾತರರಾಗಿದ್ದನ್ನು ಕಂಡ ಅವರು, ಶ್ರೀರಾಮಕೃಷ್ಣರ ನೈವೇದ್ಯದ ಕೊಠಡಿಯ ಪಶ್ಚಿಮ ಭಾಗದತ್ತ ಕೈ ತೋರಿಸಿ, ''ಅಲ್ಲೊಂದು ಪಾರಿಜಾತದ ಮರವಿದೆಯಲ್ಲ?'' ಎಂದಾಗ ನಾವು, ''ಹೌದಮ್ಮಾ, ಇದೆ'' ಎಂದೆವು.

ಶ್ರೀಮಾತೆ: ''ಆತ ಪ್ರತಿದಿನ ಸಾಯಂಕಾಲ ಒಂದು ಅಡ್ಡಪಂಚೆಯನ್ನು ತೊಳೆದು, ಒಣಗಿಸಿ ಇಟ್ಟಿರುತ್ತಿದ್ದ. ರಾತ್ರಿ ಹೊತ್ತು ಮಲಗುವ ಮುನ್ನ ಅದನ್ನು ಆ ಮರದ ಅಡಿಯಲ್ಲಿ ಹರಡಿಡುತ್ತಿದ್ದ. ಬೆಳಗ್ಗೆ ಎದ್ದು ಬಂದು, ಹೂ ಕೊಯ್ಯುವ ಸಮಯದಲ್ಲಿ ಆ ಪಂಚೆಯನ್ನು ಸುತ್ತಿ ತಂದು ಅದರ ಮೇಲೆ ಬಿದ್ದಿದ್ದ ಹೂಗಳನ್ನೆಲ್ಲ ಜೋಡಿಸಿ, ನನ್ನ ಪೂಜೆಗೋಸ್ಕರ ಅಣಿಗೊಳಿಸಿ ಕೊಡುತ್ತಿದ್ದ. ಪಾರಿಜಾತ ಹೂವು ರಾತ್ರಿಯ ಕೊನೆಯ ಭಾಗದಲ್ಲಿ ಬೀಳುತ್ತವಲ್ಲಾ? ಹಾಗಾಗಿ ನೆಲಕ್ಕೆ ಬಿದ್ದು ಎಲ್ಲ ಹೂಗಳೂ ಮಲಿನವಾಗುತ್ತವೆ ಅಂತ ಅವನು ಹಾಗೆ ಮಾಡುತ್ತಿದ್ದ. ನೋಡಿದೆಯಾ, ಎಂಥ ನಿಷ್ಠೆ ಅವನದು!'' ಸುಶೀಲ್ ಮಹಾರಾಜ್ ಕೇಳಿದರು, ''ಅಮ್ಮಾ, ನೀವು ಇಲ್ಲೇ ತಾನೇ ಶ್ರೀರಾಮಕೃಷ್ಣರು ಗಂಗಾ ನದಿಯಲ್ಲಿ ಲಯವಾದದ್ದನ್ನು ಕಂಡದ್ದು?''

ಶ್ರೀಮಾತೆ: ''ಹೌದು ಮಗು, ಅಂದು ಹುಣ್ಣಿಮೆಯ ದಿನ; ಬೆಳದಿಂಗಳು ಹಬ್ಬಿತ್ತು. ನಾನು ಆ ಮೆಟ್ಟಿಲಲ್ಲಿ ಕುಳಿತು ಗಂಗೆಯನ್ನೇ ನೋಡುತ್ತಿದ್ದೆ. ಹಾಗೆ ನೋಡುತ್ತಿದ್ದಂತೆ, ಶ್ರೀರಾಮಕೃಷ್ಣರು ಹಿಂದಿನಿಂದ ಬಂದು, ಲಗುಬಗೆಯಿಂದ ಮೆಟ್ಟಿಲಿಳಿದು ಹೋಗಿ, ಗಂಗೆಯಲ್ಲಿ ಲಯವಾಗಿಬಿಟ್ಟರು. ನನ್ನ ಮೈಯಲ್ಲಿ ರೋಮಾಂಚನ ವೆದ್ದಿತು. ಆಶ್ಚರ್ಯದಿಂದ ಎದ್ದು ನಿಂತು ನೋಡತೊಡಗಿದೆ. ಎಲ್ಲಿಂದಲೋ ನರೇನ್ (ಸ್ವಾಮಿ ವಿವೇಕಾನಂದರು) ಗಂಗಾನದಿಯ ತೀರದಲ್ಲೇ ಬಂದ, ಎರಡೂ ಕೈಗಳಿಂದ ಗಂಗೆಯ ನೀರನ್ನು ಎಲ್ಲೆಡೆ ಚಿಮುಕಿಸಲಾರಂಭಿಸಿದ. ಅಬ್ಬಾ! ಎಣಿಸಲಾಗದು, ಅಷ್ಟೊಂದು ಜನ ಎಲ್ಲಿಂದ ಬಂದರೋ! ನರೇನನ ಕೈಯಿಂದ ಬಿದ್ದ ನೀರನ್ನು ಪಡೆದು ಮುಕ್ತಿ ಹೊಂದಲಾರಂಭಿಸಿದರು! ಅದನ್ನು ನೋಡಿದ ನನಗೆ ಎಷ್ಟೋ ದಿನಗಳವರೆಗೆ ಗಂಗಾನದಿಗೆ ಇಳಿಯಲಾಗಲಿಲ್ಲ.''

ಆಗ ಸುಶೀಲ್ ಮಹಾರಾಜ್ ಹೇಳಿದರು: ''ಹಾಗೇ ಆಯಿತು, ಅಮ್ಮಾ. ಸ್ವಾಮೀಜಿ ಜಗತ್ತನ್ನೇ ಗೆದ್ದರು.''

ಶ್ರೀಮಾತೆ: ''ಆದರೆ ಇದನ್ನೆಲ್ಲ ಪಂಚತಪ ಮಾಡಿದ ನಂತರವೇ ನೋಡಿದೆ.''

*(ಮುಂದುವರಿಯುವುದು)*



# ಸ್ವಾಮಿ ವಿವೇಕಾನಂದರು ಮತ್ತು ಸ್ತ್ರೀಯರ ಪುನರುತ್ಥಾನ

ಸ್ವಾಮಿ ಶಾಂತಿವ್ರತಾನಂದ



ಭಾರತದ ಏಳಿಗೆಗೆ ಇಲ್ಲಿನ ನಾರಿಯರ ಬದುಕು ಸುಧಾರಿಸುವುದು ಅತಿಮುಖ್ಯವೆಂದೂ, ಒಟ್ಟು ಸಮಾಜದ ಅರ್ಧಭಾಗವನ್ನೇ ಕಡೆಗಣಿಸಿರುವ ಸಮಾಜ ಎಂದಿಗೂ ಉದ್ಧಾರವಾಗದೆಂದೂ ಸ್ವಾಮಿ ವಿವೇಕಾನಂದರು ನಂಬಿದ್ದರು. ಭಾರತೀಯ ಮಹಿಳೆಯ ಉನ್ನತಿಗಾಗಿ ಸ್ವಾಮೀಜಿ ಹೊಂದಿದ್ದ ಭಾವನೆಗಳೇನು, ಪ್ರಸ್ತುತ ಸಮಾಜಕ್ಕೆ ಅವುಗಳು ಎಷ್ಟು ಮುಖ್ಯವಾಗಿವೆ ಎಂಬುದನ್ನು ವಿವರಿಸುವ ಲೇಖಕರು ಮೈಸೂರು ಶ್ರೀರಾಮಕೃಷ್ಣ ಆಶ್ರಮದ ಅಂಗಸಂಸ್ಥೆಯಾದ '**ರಾಮಕೃಷ್ಣ ನೈತಿಕ ಮತ್ತು ಆಧ್ಯಾತ್ಮಿಕ ಶಿಕ್ಷಣ ಸಂಸ್ಥೆ**'ಯಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.

ಸ್ವಾಮಿ ವಿವೇಕಾನಂದರ ಸಂದೇಶ ಸ್ತ್ರೀಯರ ಆತ್ಮವಿಶ್ವಾಸ ಮತ್ತು ಜೀವನವನ್ನು ಉತ್ತಮವಾಗಿಸಲು ಪ್ರೇರೇಪಿಸಿತು. ತಮ್ಮನ್ನು ಕೆಳಕ್ಕೆಳೆಯುವ ಸಮಾಜದ ವಿರುದ್ಧವಾಗಿ, ತಮ್ಮನ್ನು ಉದ್ಧರಿಸುವ ಗುಣಗಳನ್ನು ಅಳವಡಿಸಿಕೊಳ್ಳಲು ಯತ್ನಿಸುವಂತೆ ಅದು ಮಾಡಿತು. ವಿಶ್ವಾತ್ಮರಾಗಿದ್ದ ಸ್ವಾಮೀಜಿಯ ಹೃದಯ ಜಗತ್ತಿನ ಎಲ್ಲ ಸ್ತ್ರೀಯರ ಸಲುವಾಗಿ, ವಿಶೇಷವಾಗಿ ಭಾರತೀಯ ನಾರಿಯರ ಏಳಿಗೆಗಾಗಿ ತವಕಿಸಿತು. ಭಾರತದಲ್ಲಿ ಪ್ರಚಲಿತವಿದ್ದ ಬಾಲ್ಯ ವಿವಾಹ, ಸತಿ ಸಹಗಮನ ಪದ್ಧತಿಯೇ ಮೊದಲಾದ ಸಾಮಾಜಿಕ ಪಿಡುಗುಗಳ ವಿರುದ್ಧ ಸ್ವಾಮೀಜಿ ಗುಡುಗಿದರು. ಸ್ತ್ರೀಯರ ಶೋಷಣೆ ನಿಲ್ಲಬೇಕು, ಅವರು ಸ್ವತಂತ್ರರಾಗಬೇಕು ಎಂದು ಅವರು ಸಾರಿದರು. ವೇದಕಾಲದಲ್ಲಿ ಭಾರತದ ಸ್ತ್ರೀಯರಿಗಿದ್ದ ಉನ್ನತ ಸ್ಥಾನದ ಜೊತೆಗೆ ಮಾತೃಪ್ರಧಾನ ವ್ಯವಸ್ಥೆಯ ಬಗೆಗಿನ ಅರಿವೂ ಅವರಿಗಿತ್ತು. ಅವರು ಅಂದಿನ ಟಿಬೆಟಿಯನ್ ಸ್ತ್ರೀಯರನ್ನು ಕುರಿತು ಮೆಚ್ಚುಗೆಯ ಮಾತುಗಳನ್ನಾಡಿದರು. ಅವರ ಪ್ರಕಾರ, ''ಸ್ವಾತಂತ್ರ್ಯವೇ ಪ್ರಗತಿಗೆ ಅತ್ಯಾವಶ್ಯಕವಾದುದು.'' ಸ್ವಾಮೀಜಿ ಪ್ರಕಾರ ನಾವು ಮಹಿಳೆಯರಿಗೆ ಶಿಕ್ಷಣವನ್ನು ಕೊಡಬೇಕು, ಅವರನ್ನು ಸ್ವಾವಲಂಬಿಗಳನ್ನಾಗಿ ಮಾಡಬೇಕು. ಆಗ ಅವರು ತಮ್ಮ ಅವರ ಏಳಿಗೆಯನ್ನು ಮಾಡಿಕೊಳ್ಳುತ್ತಾರೆ. ಪುರುಷರು ಇದರಲ್ಲಿ ಮೂಗು ತೂರಿಸಬಾರದು ಎಂಬ ಮಾತೊಂದನ್ನು ಅವರು ನುಡಿಯುತ್ತಾರೆ.

### ಆಧುನಿಕ ಭಾರತದಲ್ಲಿ ಮಹಿಳೆ

ಇಂದಿನ ದಿನಗಳಲ್ಲಿ ಬರಹಗಾರರಿಗೆ ಮತ್ತು ಭಾಷಣಕಾರರಿಗೆ 'ಸ್ತ್ರೀಯರ ಇಮೇಜ್' ಬಗ್ಗೆ ಮಾತನಾಡುವುದು ಒಂದು ಫ್ಯಾಷನ್ ಆಗಿಬಿಟ್ಟಿದೆ: ಆಕೆ ಹೊರಗೆ ದುಡಿಯಬೇಕೇ ಅಥವಾ ಮನೆಯಲ್ಲೇ ಇರಬೇಕೇ? ಅವಳಿಗೆ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಕೊಡಬೇಕೇ ಅಥವಾ ಬೇಡವೆ? ಅವಳು ಅತಿಯಾಗಿ ಆಕ್ರಮಣಶೀಲಳಾಗುತ್ತಿದ್ದಾಳೆಯೆ? ಆಕೆ ಒಳ್ಳೆಯ ಪತ್ನಿಯೇ ಅಥವಾ ತಾಯಿಯೆ? ಹೆಚ್ಚುತ್ತಿರುವ ವಿಚ್ಛೇದನ ಪ್ರಕರಣಗಳಲ್ಲಿ ಅಥವಾ ಬಾಲಾಪರಾಧಿಗಳ ಸಂಖ್ಯೆ ಹೆಚ್ಚುವಲ್ಲಿ ಅವಳ ಪಾತ್ರ ಹಿರಿದೆ? ಫ್ಯಾಷನ್ ವ್ಯವಹಾರಗಳಲ್ಲಿ ತನ್ನ ಉಡುಗೆ-ತೊಡುಗೆಗಳನ್ನು ಪುರುಷರು ನಿರ್ಧರಿಸುವುದು ಸರಿಯೆ? ಜಾಹೀರಾತು ಆಧಾರಿತ ವ್ಯಾಪಾರ ವಹಿವಾಟುಗಳಲ್ಲಿ ತನ್ನನ್ನು ಒಂದು ನಗೆಪಾಟಲಿನ ವಸ್ತುವಾಗಿ ಮತ್ತು ಸ್ತ್ರೀಸಹಜವಲ್ಲದ ರೀತಿಯಲ್ಲಿ ಬಳಸುವುದನ್ನು ಅವಳು ಒಪ್ಪಿ





ಯಾಳೆ? ಅಥವಾ ಅವಳು ಫ್ಯಾಷನನ್ನು ಧಿಕ್ಕರಿಸುವುದರ ಮೂಲಕ ಉದ್ಯಮ, ಆರ್ಥಿಕ ವ್ಯವಸ್ಥೆಗೆ ನಷ್ಟವನ್ನು ಮಾಡಬಹುದೆ? ಅವಳ ಉಡುಗೆ ತೊಡುಗೆಗಳು ಹೇಗಿರಬೇಕು – ಇತ್ಯಾದಿ.

ತನ್ನಿಂದ ಸಮಾಜ ನಿರೀಕ್ಷಿಸುವುದೇನನ್ನು ಎಂಬ ವಿಷಯದಲ್ಲಿ ನಿಶ್ಚಿತ ಅಭಿಪ್ರಾಯವಿಲ್ಲದ ಸ್ತ್ರೀಯು ಉತ್ತರಿಸಬೇಕಾದ ಪ್ರಶ್ನೆಗಳಲ್ಲಿ ಇವು ಕೆಲವು. ದೂಷಣೆ ಅಥವಾ ಮುಖಸ್ತುತಿಗಳಿಂದ ಹತಾಶಳಾದ ಆಕೆಗೆ ತನ್ನಿಂದ ಯಾರಿಗೂ ಸಂತೋಷವಿಲ್ಲವೆಂಬ ಭ್ರಾಂತಿ ಅನೇಕ ವೇಳೆ ಮೂಡುತ್ತದೆ. ಈಗಂತೂ ಆಕೆ ಜೀವನೋಪಾಯಕ್ಕೂ ದುಡಿಯಲೇಬೇಕು, ಕೆಲವು ಸಂದರ್ಭಗಳಲ್ಲಿ ತನ್ನ ಆತ್ಮತೃಪ್ತಿಗಾಗಿಯೂ ದುಡಿಯಬೇಕು. ಸಾಮಾನ್ಯವಾಗಿ, ಪುರುಷರಿಗೆ ಸಿಗುವ ಸಂಬಳ ಅಥವಾ ಕೂಲಿಯ ಹಣ ಪಡೆಯಲು, ಪುರುಷರು ದುಡಿಯುವುದಕ್ಕಿಂತ ಸ್ತ್ರೀಯು ಎರಡು ಪಟ್ಟು ಶ್ರಮಿಸಬೇಕಾಗುತ್ತದೆ. ಅತ್ಯಂತ ವೇಗವಾಗಿ ಬದಲಾಗುತ್ತಿರುವ ಜಗತ್ತಿನಲ್ಲಿ, ತನ್ನ ಮೌಲ್ಯದ ಅರಿವೇ ಆಕೆಗೆ ಇಲ್ಲ. ಪಾಶ್ಚಾತ್ಯ ದೇಶಗಳ ನಡವಳಿಕೆಗಳು ಮತ್ತು ಬದುಕುವ ರೀತಿ ವೇಗವಾಗಿ ಬದಲಾಗದಿರುವುದರಿಂದ ಪಾಶ್ಚಿಮಾತ್ಯ ಮಹಿಳೆ ತನ್ನ ಪೌರ್ವಾತ್ಯ ಸಹೋದರಿಯ ಬಗ್ಗೆ ಕನಿಕರ ಹೊಂದಬಹುದೇನೋ! ಪಾಶ್ಚಾತ್ಯ ದೇಶಗಳಲ್ಲಿ ಸ್ತ್ರೀಯು ಪುರುಷನಿಗೆ ಉದ್ಯೋಗ ವಿಷಯದಲ್ಲಿ ಪ್ರತಿಸ್ಪರ್ಧಿಯಲ್ಲ. ಆದ್ದರಿಂದ ಪುರುಷರ ಕೆಂಗಣ್ಣಿಗೆ ಗುರಿಯಾಗಿಲ್ಲ. ಅಮೆರಿಕಾದಲ್ಲಿ ೪ ಕೋಟಿ ವಿವಾಹಿತ ಸ್ತ್ರೀಯರಲ್ಲಿ ಮೂರನೆಯ ಒಂದು ಭಾಗದಷ್ಟು ಮಹಿಳೆಯರು ಕಾರ್ಮಿಕರು.

### ಭಾರತದಲ್ಲಿ ಸ್ತ್ರೀಯರ ಹೀನಸ್ಥಿತಿಗೆ ಕಾರಣಗಳು

ಬಹುತೇಕ ಸಾಮಾಜಿಕ ಅನಿಷ್ಟಗಳಿಗೆ ಹಾಗೂ ಸ್ತ್ರೀಯರ ದುಃಸ್ಥಿತಿಗೆ ಧರ್ಮವೇ ಕಾರಣವೆಂದು ಸಮಕಾಲೀನ ಸಮಾಜ ಸುಧಾರಕರು ಹೇಳಿದಂತೆ, ಸ್ವಾಮಿ ವಿವೇಕಾನಂದರು ಹೇಳಲಿಲ್ಲ.

''ನಮ್ಮ ಸಮಾಜ ಸುಧಾರಣೆಗೆ ಧರ್ಮನಾಶ ಆವಶ್ಯಕತೆಯಿಲ್ಲವೆಂಬುದು ನನ್ನ ಮತ. ಈಗಿನ ಸಮಾಜದ ಹೀನ ಸ್ಥಿತಿಗೆ ಧರ್ಮ ಕಾರಣವಲ್ಲ. ಧರ್ಮವನ್ನು ಸಮಾಜಕ್ಕೆ ಹೇಗೆ ಅನ್ವಯಿಸಬೇಕೋ ಹಾಗೆ ಅನ್ವಯಿಸದೇ ಇದ್ದುದೇ ಇದಕ್ಕೆ ಕಾರಣ.'' *(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂಪುಟ ೪, ಪು. ೧೮೯)*

ಸ್ವಾಮಿ ವಿವೇಕಾನಂದರ ಧರ್ಮದ ಪರಿಕಲ್ಪನೆ ಕೇವಲ ಗ್ರಂಥಗಳು ಮತ್ತು ನಂಬಿಕೆಗಳಿಗೆ ಸೀಮಿತವಾಗಿರಲಿಲ್ಲ. ಅದು ಮೂಲತಃ ಪ್ರಾಯೋಗಿಕವಾಗಿದ್ದು, ಅದರ ಉದ್ದೇಶ 'ಆತ್ಮೋನ್ನತಿ ಹಾಗೂ ಜಗತ್ತಿನ ಕಲ್ಯಾಣ' ವಾಗಿತ್ತು ಎಂಬುದು ಗಮನಾರ್ಹ.

''ವಿಧವೆಯರ ದುಃಖವನ್ನು ಶಮನ ಮಾಡದ, ಅನಾಥರ ಬಾಯಿಗೆ ಒಂದು ತುತ್ತು ಅನ್ನವನ್ನು ಕೊಡದ ಧರ್ಮದಲ್ಲಾಗಲಿ, ದೇವರಲ್ಲಾಗಲಿ ನನಗೆ ನಂಬಿಕೆಯಿಲ್ಲ'' *(ಕೃತಿಶ್ರೇಣಿ, ಸಂ. ೪, ಪು.೧೯೪)* ಎಂಬ ಮಾತು ಈ ಅಂಶವನ್ನು ಸ್ಪಷ್ಟಪಡಿಸುತ್ತದೆ.

ಸ್ವಾಮೀಜಿಯವರ ಅಭಿಪ್ರಾಯದಲ್ಲಿ, ಧರ್ಮದ ಸಾರಸರ್ವಸ್ವವೇ ಸ್ವಾತಂತ್ರ್ಯವನ್ನು ಪಡೆಯುವುದು. ಮಾನವನ ಮೂಲಭೂತ ಸ್ವಭಾವ ಸ್ವಾತಂತ್ರ್ಯ. ಆದ್ದರಿಂದಲೇ ಅವನು ದಾಸ್ಯದ ಶೃಂಖಲೆಗಳನ್ನು ಮುರಿದು ಬಿಸಾಡಲು ಹಪಹಪಿಸುತ್ತಿರುತ್ತಾನೆ, ಪ್ರಕೃತಿಯನ್ನು ಮೀರಿ ಹೋಗಬೇಕೆಂದು ತವಕ ಪಡುತ್ತಾನೆ. ಆದರೆ ಆಂತರಿಕ ಸ್ವಾತಂತ್ರ್ಯವಿಲ್ಲದೆ ಬರೀ ಬಾಹ್ಯ ಸ್ವಾತಂತ್ರ್ಯವು ಹೆಚ್ಚು ಮುದವನ್ನು ನೀಡಲಾರದು. ಆದ್ದರಿಂದಲೇ ನಮಗೆ ಧರ್ಮವು ಅತ್ಯಾವಶ್ಯಕ. ಅದು ಮಾನವನನ್ನು ತನ್ನ ನೈಜ ನೆಲೆಗೆ ಒಯ್ಯುತ್ತದೆ, ಲಿಂಗ, ಜಾತಿ ಇತ್ಯಾದಿ ತಾರತಮ್ಯಗಳನ್ನು ಮೀರಲು ನೆರವಾಗುತ್ತದೆ, ನಿರ್ಭೀತನನ್ನಾಗಿಸುತ್ತದೆ. ಕೆಳಕ್ಕೆಳೆಯುವ ಶಕ್ತಿಗಳನ್ನು ಮೆಟ್ಟಿನಿಲ್ಲಲು ನಿರ್ಭೀತಿ ಅತ್ಯಾವಶ್ಯಕ. ಧರ್ಮವು ಈ ನಿಟ್ಟಿನಲ್ಲಿ ನೆರವಾಗುತ್ತದೆ.

ಅನೇಕ ಶತಮಾನಗಳಲ್ಲಿ ನಡೆದ ವಿದೇಶಿ ದಾಳಿಕೋರರ ಆಕ್ರಮಣ, ಪುರೋಹಿತ ವರ್ಗದ ಪ್ರಾಬಲ್ಯ, ಸಾಮಾಜಿಕ ವ್ಯವಸ್ಥೆಯ ಕಮಟುತನ, ವೇದಕಾಲದ ನಂತರದಲ್ಲಿ ಸ್ತ್ರೀಯರ ವಿರುದ್ಧ ಆಗುತ್ತಿರುವ ಅಪಮಾನಗಳು ದೇವದಾಸಿ ಪದ್ಧತಿ, ಸತಿ ಪದ್ಧತಿ ಮುಂತಾದ ಅಮಾನವೀಯ ಪದ್ಧತಿಗಳಿಗೆ ಕಾರಣವಾಗಿವೆ ಎಂಬ ಅರಿವು ಸ್ವಾಮಿ ವಿವೇಕಾನಂದರಿಗಿತ್ತು. ಆದರೆ ಈ ಎಲ್ಲಾ ಕಾರಣಗಳಿಗಿಂತ ಮುಖ್ಯವಾಗಿ ಅವರಿಗೆ ಸರಿಯಾದ ಶಿಕ್ಷಣ ಕೊಡದಿರುವುದೇ ಅವರ ಪ್ರಗತಿಗೆ ತೊಡಕಾಗಿದೆ ಎಂದು ಅವರು ಆಲೋಚಿಸಿದರು. ಶಿಕ್ಷಣ ಎಂದರೆ ಪುಸ್ತಕಗಳಲ್ಲಿರುವ ವಿಷಯಗಳನ್ನು ಮಸ್ತಕದ ತುಂಬ ತುಂಬಿಸುವುದು ಎಂಬ ಅರ್ಥದಲ್ಲಿ ಸ್ವಾಮೀಜಿ

ಹೇಳಲಿಲ್ಲ. ಅವರ ಪ್ರಕಾರ ಶಿಕ್ಷಣ ಎಂದರೆ ಶೀಲ ನಿರ್ಮಾಣದ ಒಂದು ವ್ಯವಸ್ಥೆ. ಅದು ನಮ್ಮ ಮನಸ್ಸಿನ ಶಕ್ತಿಯನ್ನು ವೃದ್ಧಿಗೊಳಿಸುವುದು, ಬುದ್ಧಿಶಕ್ತಿಯನ್ನು ಹೆಚ್ಚಿಸುವುದು ಮತ್ತು ಎಲ್ಲ ರೀತಿಯಲ್ಲೂ ನಮ್ಮನ್ನು ಸ್ವಾವಲಂಬಿಗಳನ್ನಾಗಿಸುವುದು.

ಭಾರತದ ಸ್ತ್ರೀಯರ ಸ್ಥಿತಿಗತಿಯು ಸ್ವಾಮೀಜಿಯವರನ್ನು ಕಂಗೆಡಿಸಿತ್ತು. ಹಲವಾರು ಸಾಮಾಜಿಕ ಮತ್ತು ರಾಜಕೀಯ ಕಾರಣಗಳಿಂದ ಸಾಂಪ್ರದಾಯಿಕ ಹಿಂದೂ ಸಮಾಜದಲ್ಲಿ ಆಕೆಯನ್ನು ಮೂಲೆಗುಂಪು ಮಾಡಿರುವುದನ್ನು ಕಂಡು ಅವರು ಸಂಕಟಪಟ್ಟರು. ಸ್ತ್ರೀಯರು ಕೇವಲ ಮಕ್ಕಳನ್ನು ಹೆರುವ ಯಂತ್ರಗಳಲ್ಲ , ಅವರು ಸಾಕ್ಷಾತ್ ಜಗನ್ಮಾತೆಯ ಸ್ವರೂಪವೇ ಎಂದು ಅವರು ಮತ್ತೆ ಮತ್ತೆ ಸಾರಿದರು. ಭಾರತದ ದುಃಸ್ಥಿತಿಗೆ ಕಾರಣ ಮಹಿಳೆಯರನ್ನು ಸರಿಯಾಗಿ ಕಾಣದೆ ಇರುವುದು ಎಂಬ ಎಚ್ಚರಿಕೆಯ ಮಾತನ್ನೂ ಅವರು ಹೇಳಿದರು. ಸ್ವಾತಂತ್ರ್ಯಪೂರ್ವದಲ್ಲೇ ಭಾರತೀಯ ನಾರಿಯರ ಪುನರುತ್ಥಾನಕ್ಕಾಗಿ ಸ್ತ್ರೀಯರ ಮಠವೊಂದನ್ನು ಸ್ಥಾಪಿಸುವ ಯೋಜನೆಯ ಬಗ್ಗೆಯೂ ಅವರು ಚಿಂತನೆ ನಡೆಸಿ, ಹಲವರಲ್ಲಿ ತಮ್ಮ ವಿಚಾರಗಳನ್ನು ತಿಳಿಸಿದರು. ಅವಿವಾಹಿತ ಹೆಣ್ಣುಮಕ್ಕಳಿಗೆ ಮತ್ತು ವಿಧವೆಯರಿಗೆ ಸೂಕ್ತ ತರಬೇತಿ ಒದಗಿಸುವುದು ಅವರ ಉದ್ದೇಶವಾಗಿತ್ತು. ಸ್ತ್ರೀಯರನ್ನು ತುಳಿದ ದೇಶಕ್ಕೆ ಭವಿಷ್ಯವಿಲ್ಲವೆಂಬುದು ಅವರ ನಿಶ್ಚಿತವಾದ ಅಭಿಪ್ರಾಯವಾಗಿತ್ತು. ಅವರು ಹೇಳಿದರು:

''ನಾವು ಘೋರ ಪಾಪಿಗಳು. ಸ್ತ್ರೀಯರನ್ನು ಹೇಯವಾದ ಕ್ರಿಮಿಗಳು, ನರಕಕ್ಕೆ ದ್ವಾರಗಳು ಇತ್ಯಾದಿಯಾಗಿ ಕರೆದುದರಿಂದಲೇ ನಮ್ಮ ಪತನವಾಗಿದೆ.''

ಸತಿ ಮತ್ತು ಬಾಲ್ಯವಿವಾಹದಂತಹ ತುಚ್ಛವಾದ ಸಾಮಾಜಿಕ ಪದ್ಧತಿಗಳು ವಿವೇಕಹೀನ ನಂಬಿಕೆಗಳ ಪಳೆಯುಳಿಕೆಗಳಾಗಿವೆ ಎಂಬುದು ಸ್ವಾಮೀಜಿಯವರ ಅಭಿಮತ. ಇಂತಹ ಅನಿಷ್ಟಗಳನ್ನು ಅವರು ತೀವ್ರವಾಗಿ ಖಂಡಿಸಿದರು:

''ಬಲಾತ್ಕಾರವಾಗಿ ಸತಿ ಮಾಡಿಸುವುದರಲ್ಲಿ ಆಕೆಯ ಪತಿಭಕ್ತಿ ಎಂಥದ್ದು? ಮೂಢನಂಬಿಕೆಯ ಮೂಲಕ ಜನರಿಂದ ಪುಣ್ಯ ಕೆಲಸಗಳನ್ನು ಏಕೆ ಮಾಡಿಸಬೇಕು? ಅವರನ್ನು ಸ್ವತಂತ್ರರನ್ನಾಗಿ ಮಾಡಿ, ಜನಗಳ ಬಂಧನವನ್ನು ಸಾಧ್ಯವಾದಷ್ಟೂ ಬಿಡಿಸಿ ಎಂದು ನಾನು ಹೇಳುವುದು.'' *(ಕೃತಿಶ್ರೇಣಿ, ಸಂ. ೫, ಪು.೧೨೩)*

ಆದರೆ ಅಮಾನವೀಯವಾದ ಸತಿ ಪದ್ಧತಿಗೂ ಧರ್ಮಕ್ಕೂ ಯಾವುದೇ ಸಂಬಂಧವಿಲ್ಲವೆಂಬುದು ಸ್ವಾಮೀಜಿ ವಾದ. ಮೊಘಲರ ಆಕ್ರಮಣದಿಂದ ತತ್ತರಿಸಿದ ಭಾರತ, ತನ್ನ ಹೆಣ್ಣುಮಕ್ಕಳ ಮಾನ ಕಾಪಾಡಲು ಈ ರೀತಿಯ ಆಚರಣೆಗಳನ್ನು ಪ್ರಾರಂಭ ಮಾಡಿತು ಎಂದರು. ಕಂದಾಚಾರದಿಂದ ಹುಟ್ಟಿದ ಪದ್ಧತಿಯನ್ನು ಪುರೋಹಿತ ವರ್ಗದವರು ತಮ್ಮ ಲಾಭಕ್ಕಾಗಿ ಬಳಸಿಕೊಂಡರು ಮತ್ತು ಜನರು ಕುರಿಗಳಂತೆ ಅವುಗಳನ್ನು ಅನುಸರಿಸಿದರು. ಬಾಲ್ಯವಿವಾಹವೂ ಅಷ್ಟೇ ಖಂಡನೀಯ. ಅಲ್ಲದೆ ಅನೇಕ ಸಂದರ್ಭಗಳಲ್ಲಿ ವರ ಮತ್ತು ಬಾಲಿಕಾವಧುವಿನ ನಡುವೆ ವಯಸ್ಸಿನ ಅಂತರ ಎಷ್ಟಿರುತ್ತಿತ್ತೆಂದರೆ ಆ ಬಾಲಿಕೆ ಹದಿಹರೆಯ ತಲುಪುವ ಮುನ್ನವೇ ವಿಧವೆಯಾಗಿಬಿಡುತ್ತಿದ್ದಳು. ನಂತರ ಅವಳ ಬಾಳು ಘೋರ. ಜೀವನೋಪಾಯಕ್ಕೆ ಮಾರ್ಗವಿಲ್ಲ, ಜೊತೆಗೆ ಆಗಿನ 'ಹಿಂದೂ ನ್ಯಾಯವನ್ನು ಜಾರಿಗೊಳಿಸುತ್ತಿದ್ದವರು' ವಿಧಿಸುತ್ತಿದ್ದ ಕಟ್ಟು ಕಟ್ಟಳೆಗಳು! ಬಾಲ್ಯವಿವಾಹ ಅವರಿಂದ ಶಿಕ್ಷಣವನ್ನೂ ಕಸಿಯುತ್ತಿತ್ತು. ದೈಹಿಕವಾಗಿ ಪೂರ್ಣ ಸಮರ್ಥರಾಗುವ ಮುನ್ನವೇ ಅವರು ತಾಯಾಗುತ್ತಿದ್ದರು. ಇಂತಹವರ ಸಂಖ್ಯೆ ಆಗ ಬಹಳಷ್ಟು. ೧೮೯೩ ಡಿಸೆಂಬರ್ ೨೮ರಂದು ಹರಿಪದ ಮಿತ್ರನಿಗೆ ಬರೆದ ಪತ್ರವೊಂದರಲ್ಲಿ ಸ್ವಾಮೀಜಿ ತಮ್ಮ ಮನದ ಬೇಗುದಿಯನ್ನು ವ್ಯಕ್ತಪಡಿಸುತ್ತಾರೆ:

''ಹನ್ನೊಂದು ವರ್ಷಕ್ಕೆ ಸರಿಯಾಗಿ ನಮ್ಮ ಹುಡುಗಿಯರಿಗೆ ಮದುವೆ ಮಾಡುವುದು ತಪ್ಪುವುದಿಲ್ಲ. ಇಲ್ಲದೆ ಇದ್ದರೆ ಎಲ್ಲಿ ನೀತಿಬಾಹಿರರಾಗುತ್ತಾರೋ ಎಂಬ ಭಯ! ಮನು ಏನು ಹೇಳಿರುವನು? – 'ಗಂಡುಮಕ್ಕಳಂತೆಯೇ ಹೆಣ್ಣುಮಕ್ಕಳನ್ನು ಸಂರಕ್ಷಿಸಿ ವಿದ್ಯಾವಂತೆಯರನ್ನಾಗಿ ಮಾಡಬೇಕು.' ಮೂವತ್ತು ವರ್ಷಗಳವರೆಗೆ ಬ್ರಹ್ಮಚರ್ಯ ಪರಿಪಾಲನೆ ಮಾಡಿದ ನಂತರ ಗಂಡುಮಕ್ಕಳಿಗೆ ಮದುವೆ ಮಾಡುವಂತೆ, ಹೆಣ್ಣುಮಕ್ಕಳು ಕೂಡ ಬ್ರಹ್ಮಚರ್ಯ ವ್ರತವನ್ನು ಪರಿಪಾಲನೆ ಮಾಡಬೇಕು ಮತ್ತು ತಂದೆತಾಯಿಗಳು ಅವರಿಗೆ ವಿದ್ಯಾಭ್ಯಾಸ ನೀಡಬೇಕು. ಆದರೆ ನಾವು ನಿಜವಾಗಿಯೂ ಮಾಡುತ್ತಿರುವುದೇನು?'' *(ಕೃತಿಶ್ರೇಣಿ, ಸಂ.೪, ಪು.೧೦೦)*

ಭಾರತದಲ್ಲಿ ಹೆಣ್ಣುಮಕ್ಕಳನ್ನು ಒಂದು ಹೊರೆ ಎಂದು ಪರಿಗಣಿಸುವುದು ಸ್ವಾಮೀಜಿಗೆ ಬಹಳ ನೋವನ್ನುಂಟುಮಾಡುತ್ತಿತ್ತು. ಆದ್ದರಿಂದಲೇ ತಾಯಿತಂದೆಯರು ಅವರನ್ನು ಸಾಧ್ಯವಾದಷ್ಟೂ ಬೇಗ ವಿವಾಹ ಮಾಡಿ ಮನೆಯಿಂದ ಅಟ್ಟುತ್ತಿದ್ದರು. ಮಗಳು ಎಂಬುದಕ್ಕೆ ಸಂಸ್ಕೃತದಲ್ಲಿ 'ದುಹಿತ' ಎನ್ನಲಾಗಿದೆ. ದುಹಿತ ಎಂದರೆ 'ಗೌಳಿಗಿತ್ತಿ'. ಇದನ್ನು ತಿರುಚಿ, 'ಮನೆಯ ಹಾಲನ್ನೆಲ್ಲ (ಸಂಪತ್ತನ್ನೆಲ್ಲ) ಬರಿದು ಮಾಡುವವಳು' ಎಂದು ಅರ್ಥೈಸಿಬಿಟ್ಟರು.

ಬ್ರಿಟಿಷ್ ಸರ್ಕಾರ ಹೆಣ್ಣು ಮಗುವಿಗೆ ೧೨ ವರ್ಷಗಳಾಗುವ ತನಕ ಮದುವೆ ಮಾಡುವಂತಿಲ್ಲ , ಹಾಗೇನಾದರೂ ಆದರೆ ವರನಿಗೆ ಶಿಕ್ಷೆಯಾಗುತ್ತದೆ ಎಂಬ ಕಾನೂನನ್ನು ಜಾರಿಗೊಳಿಸಿದ್ದು ಸ್ವಾಮಿ ವಿವೇಕಾನಂದರಿಗೆ ಮೆಚ್ಚುಗೆಯಾಗಿತ್ತು. ಇದರ ವಿರುದ್ಧ ಧ್ವನಿ ಎತ್ತಿದ ಸಂಪ್ರದಾಯವಾದಿಗಳ ವಿರುದ್ಧ ಸ್ವಾಮೀಜಿ ಗುಡುಗಿದರು:

''ಈ ನಿಮ್ಮ ಧರ್ಮದ ಮಾರ್ಗದರ್ಶಕರೆಲ್ಲಾ ಅದಕ್ಕೆ ವಿರೋಧವಾಗಿ ಅಬ್ಬರವನ್ನೆಬ್ಬಿಸಿ, 'ಅಯ್ಯೋ! ನಮ್ಮ ಧರ್ಮ ಹಾಳಾಯಿತು!' ಎಂದು ಕೂಗಾಡಿದರು. ಹನ್ನೆರಡು ಅಥವಾ ಹದಿಮೂರು ವರ್ಷದ ಹುಡುಗಿಯನ್ನು ತಾಯಿಯಾಗಿ ಮಾಡುವುದರಲ್ಲೇ ಧರ್ಮದ ಸಾರವೆಲ್ಲ ಹುದುಗಿಕೊಂಡಿರುವುದಂತೆ! ಅದಕ್ಕೆ ನಮ್ಮನ್ನಾಳುವವರು 'ಇದು ಎಂತಹ ವಿಚಿತ್ರ ! ಇವರದು ಎಂತಹ

ಧರ್ಮ!' ಎಂದು ಸಹಜವಾಗಿ ಯೋಚಿಸುವರು..'' *(ಕೃತಿಶ್ರೇಣಿ, ಸಂ.೮, ಪು.೩೧೦).*

ಸ್ತ್ರೀಪರವಾದ ಅವರ ಕಾಳಜಿ ಕೇವಲ ಭಾರತಕ್ಕೆ ಮಾತ್ರ ಸೀಮಿತವಾಗಿರಲಿಲ್ಲ. ಬಾಸ್ಟನ್‌ನಲ್ಲಿ ಉಪನ್ಯಾಸ ನೀಡುವಾಗ ಕೇಳಿದರು, ''ಯಾವ ದೇಶ ಸ್ತ್ರೀಯರನ್ನು ಅಪಮಾನಗೊಳಿಸಿಲ್ಲ?' ಹಿಂದೆ ಒಂದು ಕಾಲದಲ್ಲಿ ಅವರನ್ನು ಭೂಮಿ-ಕಾಣಿಗಳ ಜೊತೆಗೆ ಸೇರಿಸಿ ವ್ಯಾಪಾರ ಮಾಡುತ್ತಿದ್ದರು. ಅವರಿಗೆ ಪ್ರಾಥಮಿಕ ಮಾನವ ಹಕ್ಕುಗಳನ್ನೂ ನಿರಾಕರಿಸಿದ್ದರು. ಯುರೋಪು ಮತ್ತು ಅಮೆರಿಕದಲ್ಲಿ ಸ್ತ್ರೀಯರ ಧನಕ್ಕಾಗಿ ಅವರನ್ನು ಮದುವೆಯಾಗುತ್ತಿದ್ದರು. ಎಲ್ಲವನ್ನೂ ಕಸಿದುಕೊಂಡು ಹೊರಗಟ್ಟುತ್ತಿದ್ದರು. ಯುಗಯುಗಗಳಿಂದ ಅಪಮಾನಗಳನ್ನು ಅನುಭವಿಸಿ ಅವರು ಅನಂತ ಸಹನೆ, ಸಹಿಷ್ಣುತೆಗಳ ಮೂರ್ತಿಗಳಾಗಿದ್ದಾರೆ.'' ಭಾರತದಲ್ಲಿ ಸತಿ ಮತ್ತು ಬಾಲ್ಯವಿವಾಹಗಳಂತಹ ಅಮಾನುಷ ಪದ್ಧತಿಗಳಿದ್ದರೆ, ಪಾಶ್ಚಾತ್ಯರ ಕ್ರೈಸ್ತ ಸಂಪ್ರದಾಯದಲ್ಲಿ ವೃದ್ಧ ಮಹಿಳೆಯರನ್ನು ಸುಡುಗಂಬದಲ್ಲಿ ಸುಡುವ ಪದ್ಧತಿಯು ಜಾರಿಯಲ್ಲಿತ್ತು.

### ವೇದಾಂತದ ಮೂಲಕ ಸ್ತ್ರೀಯರ ಪುನರುತ್ಥಾನ ಸಾಧ್ಯ

ಸ್ವಾಮಿ ವಿವೇಕಾನಂದರ ಈ ವಾಣಿ ಸ್ತ್ರೀಯರಿಗೆ ತಮ್ಮ ನಿಜ ಸ್ವರೂಪವನ್ನು ಅರ್ಥಮಾಡಿಸುತ್ತದೆ ಮತ್ತು ಅವರಲ್ಲಿ ಅವರಿಗೆ ವಿಶ್ವಾಸ ಹಾಗೂ ದೃಢತೆಯನ್ನು ತುಂಬುತ್ತದೆ:

''ಸಾವಿರಾರು ವರ್ಷಗಳಿಂದ ಮಹಿಳೆ ಕಷ್ಟಪಟ್ಟಿರುವಳು. ಇದರಿಂದ ಅವಳಿಗೆ ಅನಂತ ಶಕ್ತಿ, ಅನಂತ ತಾಳ್ಮೆ ಬಂದಿದೆ. ಅವಳು ಒಂದು ಭಾವನೆಗೆ ನಿಷ್ಠಳಾಗಿರುತ್ತಾಳೆ. ಇದರಿಂದಲೇ ಅವಳು ಮೂಢನಂಬಿಕೆಯ ಧರ್ಮಗಳಿಗೂ ಆಶ್ರಯವಾಗಿರುವಳು. ಇದೇ ಅವಳನ್ನು ಮುಕ್ತಿಗೂ ಒಯ್ಯುವುದು. ನಾವು ವೇದಾಂತಿಗಳಾಗಿ ವೇದಾಂತದಲ್ಲಿರುವ ಉದಾತ್ತ ಭಾವನೆಗಳನ್ನು ಅನುಷ್ಠಾನಕ್ಕೆ ತರಬೇಕಾಗಿದೆ. ಜನಸಾಮಾನ್ಯರಿಗೆ ಇದು ದೊರೆಯಬೇಕು... ಭಾರತದಲ್ಲಿ ಬುದ್ಧ, ಶಂಕರ ಮುಂತಾದ ವ್ಯಕ್ತಿಗಳು ಈ ಉದಾತ್ತ ಭಾವನೆಗಳನ್ನು ಪ್ರಚಾರಕ್ಕೆ ತಂದರು. ಆದರೆ ಜನಸಾಮಾನ್ಯರಲ್ಲಿ ಅದು ಅನುಷ್ಠಾನಕ್ಕೆ ಬರಲಿಲ್ಲ. ಜನಸಾಮಾನ್ಯರು ವೇದಾಂತದ ಸಂದೇಶದಂತೆ ಬಾಳುವುದನ್ನು ಈ ಹೊಸ ಯುಗವು ನೋಡಬೇಕು. ಇದು ಸ್ತ್ರೀಯರ ಮೂಲಕವಾಗಿಯೇ ಬರಬೇಕು.'' *(ಕೃತಿಶ್ರೇಣಿ, ಸಂ.೧, ಪು.೩೪೫)*

ಸ್ವಾಮೀಜಿ ಕರೆಗೆ ಓಗೊಟ್ಟ ಸ್ತ್ರೀಯರು ಆದರ್ಶ ಸ್ತ್ರೀಯರಾಗಿದ್ದಾರೆ. ಅರ್ಧ ಶತಮಾನ ಕಳೆದರೂ ಅವರಿತ್ತ ಸ್ಥೈರ್ಯ ಮತ್ತು ಸ್ಫೂರ್ತಿಗಳನ್ನು ಜನರು ನೆನೆಯುತ್ತಾರೆ. ಉದಾಹರಣೆಗೆ: ಸಹೋದರಿಯರಾದ ನಿವೇದಿತಾ, ಕ್ರಿಸ್ಟೀನ್, ಹರಿದಾಸಿ, ಮೀಡ್ ಸಹೋದರಿಯರು, ಜೊಸೆಫೀನ್ ಮೆಕ್‌ಲಿಯಾಡ್, ಇನ್ನೂ ಅನೇಕರು. ಅಪಾರ ಪ್ರತಿಭಾವಂತರಾಗಿದ್ದ ಇವರೆಲ್ಲರೂ ಸ್ವಾಮೀಜಿ ಮಾರ್ಗದರ್ಶನದಲ್ಲಿ ನಡೆದರು. ಮಾನವ ಜನಾಂಗಕ್ಕೆ ಸ್ವಾಮೀಜಿಯವರ ನಿರ್ದೇಶಾನುಸಾರ ಸೇವೆಮಾಡುತ್ತಾ ಸ್ತ್ರೀಜನಾಂಗಕ್ಕೆ ನಾಯಕಿಯರಾದರು, ಶಕ್ತಿಯ ಕೇಂದ್ರವಾದರು; ಶಾಂತಿ, ಸ್ವಾತಂತ್ರ್ಯಗಳನ್ನು ಪಡೆದರು. ೧೯೪೭ರ ಸುಮಾರಿನಲ್ಲಿ ಸಹೋದರಿ ಲಲಿತಾ ಅವರನ್ನು ಕಂಡಿದ್ದವರು ಆಕೆಯ ಅಪರೂಪದ ವಿಶಿಷ್ಟ ವ್ಯಕ್ತಿತ್ವದಿಂದ ಪ್ರಭಾವಿತರಾಗದೆ ಇರಲು ಸಾಧ್ಯವೇ ಇರಲಿಲ್ಲ. ಆಗ ಆಕೆಯ ವಯಸ್ಸು ೯೦ನ್ನೂ ಮೀರಿತ್ತು. ಆದರೂ ಅವರ ಮುಖ, ಮನಸ್ಸು, ಚೇತನ ಆಕೆಯ ಸ್ಥಿರ ಸಂಕಲ್ಪದ ದ್ಯೋತಕವಾಗಿದ್ದವು. ನಿರುತ್ಸಾಹವೆಂಬುದರ ಪರಿಚಯವೇ ಆಕೆಗೆ ಇರಲಿಲ್ಲ. ಜೀವನವನ್ನು ಆಕೆ ಅನುಗ್ರಹ ರೂಪದಲ್ಲಿ ಸ್ವೀಕರಿಸಿದ್ದರು.

ಸ್ತ್ರೀಯರ ಆಧ್ಯಾತ್ಮಿಕ ಮತ್ತು ಬೌದ್ಧಿಕ ಸ್ವಾತಂತ್ರ್ಯದ ಅಗತ್ಯ ಇಂದು ಹೆಚ್ಚು ಸ್ಪಷ್ಟವಾಗಿ ಗೋಚರಿಸುತ್ತಿದೆ. ಏಕೆಂದರೆ ಆಕೆ ತನ್ನ ಹಾಗೂ ಪುರುಷರ ಪುನರುತ್ಥಾನವನ್ನು ಸಾಧಿಸಬೇಕಾಗಿದೆ. ಸ್ವಾಮಿ ವಿವೇಕಾನಂದರು ಸ್ಥಾಪಿಸಿದ ರಾಮಕೃಷ್ಣ ಮಠದ ಸ್ವಾಮಿಗಳ ಮಾರ್ಗದರ್ಶನದ ನೆರವಿನೊಂದಿಗೆ ಇಂದು ಅಮೆರಿಕದ ವೇದಾಂತ ಕೇಂದ್ರಗಳಲ್ಲಿ ಸ್ವಾರ್ಥರಹಿತ ಸ್ತ್ರೀಯರು ಅತ್ಯಂತ ವಿನಮ್ರರಾಗಿ ಲೋಕಹಿತ ಕಾರ್ಯಗಳಲ್ಲಿ ತೊಡಗಿದ್ದಾರೆ. ಅಲ್ಲದೆ ಶಾರದಾ ಮಠ ಮತ್ತು ರಾಮಕೃಷ್ಣ ಶಾರದಾ ಮಿಷನ್ ಎಂಬ ಸಂಘವು ಮಹಿಳೆಯರಿಂದ, ಮಹಿಳೆಯರಿಗಾಗಿ ನಡೆಸುತ್ತಿರುವ, ಆತ್ಮಕಲ್ಯಾಣ ಮತ್ತು ಸಮಾಜ ಕಲ್ಯಾಣದ ಅತ್ಯುನ್ನತ ಕೇಂದ್ರವಾಗಿದೆ.

ಪೂರ್ವವಿರಲಿ, ಪಶ್ಚಿಮವಿರಲಿ ಜನರು ಆಧುನಿಕತೆಯ ಅಸಭ್ಯತೆ, ಅನರ್ಥ ಮತ್ತು ಅನಾದರಗಳನ್ನು ಕಂಡು ಭ್ರಮ ನಿರಸನಗೊಂಡಾಗ ಸ್ವಾಮಿ ವಿವೇಕಾನಂದರ ಪತ್ರಗಳನ್ನು ಓದಿದರೆ, ತಮ್ಮ ಜೀವನಕ್ಕೊಂದು ಅರ್ಥವಿದೆ, ಉದ್ದೇಶವಿದೆ ಎಂಬ ಭರವಸೆ ಅವರಲ್ಲಿ ಪುನಃ ಮೂಡುವುದು. ಕೆಲವು ಪಾಶ್ಚಾತ್ಯ ಸ್ತ್ರೀವಾದಿಗಳು ಸ್ತ್ರೀಪುರುಷರ ನಡುವಣ ಸಮರ ಎಂದಿಗೂ ಮುಗಿಯದು ಎಂಬ ಕಲ್ಪನೆಗಳನ್ನು ಹುಟ್ಟುಹಾಕಿದ್ದಾರೆ. ಇದಕ್ಕೆ ವ್ಯತಿರಿಕ್ತವಾಗಿ ಸ್ವಾಮಿ ವಿವೇಕಾನಂದರು ಸ್ತ್ರೀಪುರುಷರ ಪಾತ್ರಗಳು ಬೇರೆ ಬೇರೆ, ಅವು ಒಂದಕ್ಕೊಂದು ಪೂರಕವೇ ಹೊರತು ವಿರುದ್ಧವಲ್ಲ ಎಂದು ವಾದಿಸಿದರು. ಸ್ತ್ರೀ ಅಥವಾ ಪುರುಷರಲ್ಲಿ ಯಾರೂ ಮೇಲಲ್ಲ, ಯಾರೂ ಕೀಳಲ್ಲ ; ಇಬ್ಬರೂ ಸಮಾನರು. ಈ ವಿಷಯದಲ್ಲಿ ವಿವೇಕಾನಂದರ ಅಭಿಪ್ರಾಯಗಳು ಅದ್ವೈತ ವೇದಾಂತದ ಏಕದಲ್ಲಿ ರೂಪುಗೊಂಡಿವೆ - **'ಏಕಮೇವಾದ್ವಿತೀಯಂ'**. ಒಂದೇ, ಎರಡಲ್ಲ ಎಂದು. ಆಧ್ಯಾತ್ಮಿಕವಾಗಿ ಹೇಳುವುದಾದರೆ ಸ್ತ್ರೀಪುರುಷರಿಬ್ಬರೂ (ಪ್ರಕೃತಿ-ಪುರುಷ) ಒಂದೇ ಸತ್ಯದಿಂದ ಆದವರು. ಶಿವ-ಶಕ್ತಿಯರು ತೋರಿಕೆಗೆ ಬೇರೆಯಾಗಿ ಕಂಡರೂ ಅವರಿಬ್ಬರೂ ಒಂದೇ - ಬೆಂಕಿ ಹಾಗೂ ಅದರ ಸುಡುವ ಶಕ್ತಿಯಂತೆ.

೧೮೯೩ ಡಿಸೆಂಬರ್ ೨೮ರಂದು ಸ್ವಾಮೀಜಿ ಶಿಕಾಗೋದಿಂದ ಹರಿಪದ ಮಿತ್ರನಿಗೆ ಬರೆದ ಪತ್ರವೊಂದರಲ್ಲಿ ಅವರಿಗೆ ಭಾರತೀಯ ಸ್ತ್ರೀಯರ ಬಗ್ಗೆ ಇದ್ದ ಕಳಕಳಿ ಸ್ಪಷ್ಟವಾಗುತ್ತದೆ:

''ಅಬ್ಬ! ಅವರು (ಅಮೆರಿಕದ ಸ್ತ್ರೀಯರು) ಎಷ್ಟು ಸ್ವತಂತ್ರರಾಗಿರುವರು! ಸಾಮಾಜಿಕ ಮತ್ತು ಪೌರ ಕರ್ತವ್ಯಗಳನ್ನು ನಿಯಂತ್ರಿಸುವವರು ಅವರೇ... ಆದರೆ ನಮ್ಮ ದೇಶದಲ್ಲಿ ಮಹಿಳೆಯರು ಸುರಕ್ಷಿತವಾಗಿ ದಾರಿಯಲ್ಲಿ ನಡೆಯಲು ಕೂಡ ಅವಕಾಶವಿಲ್ಲ!... ಇಲ್ಲಿ ಪುರುಷರು ಸಾಧ್ಯವಾದಷ್ಟು ಉತ್ತಮವಾಗಿ ಸ್ತ್ರೀಯರನ್ನು ಸನ್ಮಾನಿಸುವರು. ಅದಕ್ಕೇ ಅವರು ಅಷ್ಟು ಮುಂದುವರಿದಿರುವುದು, ವಿದ್ಯಾವಂತರಾಗಿರುವುದು, ಸ್ವತಂತ್ರರಾಗಿರುವುದು ಮತ್ತು ಉತ್ಸಾಹಭರಿತರಾಗಿರುವುದು. ಆದರೆ ನಾವೇಕೆ ಗುಲಾಮರಂತೆ ಇರುವುದು? ದುಃಖದಲ್ಲಿ ನರಳುವುದು, ಸತ್ತಂತೆ ತೋರುವುದು? ಇದಕ್ಕೆ ಉತ್ತರ ಸ್ಪಷ್ಟವಾಗಿಯೇ ಇದೆ.'' *(ಕೃತಿಶ್ರೇಣಿ, ಸಂ.೪, ಪು.೧೦೦)*

### ಸ್ತ್ರೀಯರ ಸ್ಥಿತಿಗತಿಗಳನ್ನು ಸುಧಾರಿಸಲು ಸರಿಯಾದ ಸಾಧನ : ಸೂಕ್ತ ಶಿಕ್ಷಣ

''ಶಿಕ್ಷಣ ಕೊಡಿ, ಶಿಕ್ಷಣ ಕೊಡಿ'' ಎಂದು ಅವರು ತಮ್ಮ ಶಿಷ್ಯರನ್ನು ಮತ್ತೆ ಮತ್ತೆ ಪ್ರೇರೇಪಿಸುತ್ತಿದ್ದರು. ''ಅನ್ಯ ಮಾರ್ಗವೇ ಇಲ್ಲ - **ನಾನ್ಯಃ ಪಂಥಾ ವಿದ್ಯತೇಽಯನಾಯ**''. ಹೆಣ್ಣುಮಕ್ಕಳಿಗೆ ಸೀತೆ, ಸಾವಿತ್ರಿ, ದಮಯಂತಿ ಮತ್ತು ಅಂತಹ ಇತರ ಆದರ್ಶ ನಾರಿಯರ ಕಥೆಗಳನ್ನು ಹೇಳಿ ಹುರಿದುಂಬಿಸಿ. ನಿಃಸ್ವಾರ್ಥತೆ ಮತ್ತಿತರ ಸದ್ಗುಣಗಳನ್ನು ಬೋಧಿಸಿ. ಅವರಿಗೆ ವಿಜ್ಞಾನ, ಕಲೆ, ಗೃಹ ನಿರ್ವಹಣೆ, ಅಡುಗೆ, ಹೊಲಿಗೆ ಇತ್ಯಾದಿ ನಿತ್ಯೋಪಯೋಗಿ ವಿಷಯಗಳನ್ನು ಕಲಿಸಿ. ಆದರೆ ಕತೆ-ಕಾದಂಬರಿಗಳನ್ನು ಹೆಚ್ಚು ಓದುವುದು ಬೇಡ. ಅವು ಅವರ ಮನಸ್ಸುಗಳನ್ನು ಮಲಿನಗೊಳಿಸಬಹುದು. ಜೊತೆಗೆ ಅವರು ಚಿತ್ರಕಲೆ, ಹಣ್ಣಿನ ಆಕೃತಿಗಳನ್ನು ಮಾಡುವುದು, ಮತ್ತಿತರ ಕುಶಲ ಕಲೆಗಳು, ಛಾಯಾಚಿತ್ರಣ, ಕಾಗದದಲ್ಲಿ ವಿನ್ಯಾಸಗಳನ್ನು ಕತ್ತರಿಸುವುದು, ಆಲಂಕಾರಿಕ ಕೆಲಸಗಳು, ಕಸೂತಿ ಇತ್ಯಾದಿಗಳನ್ನೂ ಕಲಿಯಬಹುದು. ಪ್ರತಿಯೊಬ್ಬ ಹೆಣ್ಣುಮಗಳೂ ಅಗತ್ಯವಿದ್ದರೆ ಜೀವನೋಪಾಯಕ್ಕಾಗಿ ಏನಾದರೂ ಒಂದು ಕಲೆಯನ್ನು ಕಲಿತಿರುವಂತೆ ನೋಡಿಕೊಳ್ಳಿ. ಸಮಾನ ಅವಕಾಶಗಳು, ಸೂಕ್ತ ಶಿಕ್ಷಣ ಮತ್ತು ತರಬೇತಿ ದೊರೆತರೆ ಸ್ತ್ರೀಯರು ಎಲ್ಲ ರಂಗಗಳಲ್ಲೂ ಶ್ರೇಷ್ಠತೆಯನ್ನು ಮೆರೆಯಬಲ್ಲರು ಎಂದು ಸ್ವಾಮಿ ವಿವೇಕಾನಂದರು ನಂಬಿದ್ದರು. ಬೌದ್ಧಿಕ ಅಥವಾ ಆಧ್ಯಾತ್ಮಿಕ ವಿಷಯಗಳಲ್ಲಿ ಪ್ರಗತಿ ಸಾಧಿಸಲು ಸ್ತ್ರೀಯರು ಅಸಮರ್ಥರು ಎಂಬ ಭಾವನೆಯನ್ನು ಅವರು ಖಡಾಖಂಡಿತವಾಗಿ ತಿರಸ್ಕರಿಸಿದರು. ''ನೀನಾವ ಧರ್ಮಗ್ರಂಥದಲ್ಲಿ ಸ್ತ್ರೀಯರು ಜ್ಞಾನ, ಭಕ್ತಿಗೆ ಅನರ್ಹರೆಂಬುದನ್ನು ಓದಿರುವೆ?'' ಎಂದು ಸ್ವಾಮೀಜಿ ಪ್ರಶ್ನಿಸುತ್ತಾರೆ. *(ಕೃತಿಶ್ರೇಣಿ, ಸಂ.೪, ಪು.೨೧೩)*

'ಸ್ತ್ರೀಯರು ಅಬಲೆಯರು, ಯಾವಾಗಲೂ ಪರಾವಲಂಬಿಗಳು' ಎಂಬ ಮಾತುಗಳು ಅವರಿಗೆ ಅಸಹ್ಯ ಹುಟ್ಟಿಸುತ್ತಿದ್ದವು. ಅವರು ಹೇಳುತ್ತಾರೆ:

''ಇತರ ವಿಷಯಗಳ ಜೊತೆಗೆ ಅವರು ಪರಾಕ್ರಮ ಮತ್ತು ಶೌರ್ಯವನ್ನು ಕಲಿಯಬೇಕು. ಈ ವರ್ತಮಾನ ಕಾಲದಲ್ಲಿ ಅವರು ಆತ್ಮರಕ್ಷಣೆಯ ಪಾಠವನ್ನೂ ಕಲಿಯುವುದು ಅತ್ಯಾವಶ್ಯಕವಾಗಿದೆ.'' *(ಕೃತಿಶ್ರೇಣಿ, ಸಂ.೪, ಪು.೩೧೦)*

ಸ್ವಾತಂತ್ರ್ಯವೇ ಬೆಳವಣಿಗೆಗೆ ಅಗತ್ಯವಾದ ಪ್ರಥಮ ಷರತ್ತು ಎನ್ನುತ್ತಿದ್ದರು ಸ್ವಾಮಿ ವಿವೇಕಾನಂದರು. ಅವರೆಂದೂ, 'ನಾನು ಸ್ತ್ರೀಯರ ಸಮಸ್ಯೆಗಳನ್ನು ಪರಿಹರಿಸಬಲ್ಲೆ' ಎಂದು ಹೇಳಿಕೊಳ್ಳಲಿಲ್ಲ. ಬದಲಿಗೆ ಸ್ತ್ರೀಯರಿಂದಲೇ ಆ ಕೆಲಸ ಆಗಬೇಕು ಎಂದು ಬಯಸಿದರು. ಅವರು ಸ್ವಂತವಾಗಿ ಆಲೋಚಿಸಬೇಕು, ತಮ್ಮ ಈಗಿನ ಸಾಮಾಜಿಕ ಸ್ಥಿತಿಗತಿಗಳಿಗೆ ಕಾರಣವಾಗಿರುವ ರೋಗಗಳನ್ನು ಪತ್ತೆಮಾಡಬೇಕು. ನಂತರ ಅದನ್ನು ಆಮೂಲಾಗ್ರವಾಗಿ ತೊಲಗಿಸಲು ಮುಂದೆ ಬರಬೇಕು. ಸ್ತ್ರೀಯರು ಸ್ವತಂತ್ರರಾಗಬೇಕು ಮತ್ತು ಯಾವುದೇ ಬಗೆಯ ಕೀಳರಿಮೆಗೆ ತುತ್ತಾಗಬಾರದು. ಯಾವುದೇ ವಿಷಯದಲ್ಲೂ ಅವರು ಪುರುಷರನ್ನು ಸುಮ್ಮನೆ ಅನುಕರಿಸುತ್ತಾ ಹೋಗಬಾರದು. ಹಾಗೆಯೇ ಪುರುಷರು ಅನಗತ್ಯವಾಗಿ ಸ್ತ್ರೀಯರ ವಿಷಯಗಳಲ್ಲಿ ಮೂಗು ತೂರಿಸಲೂ ಅವಕಾಶ ನೀಡಬಾರದು. ಸಮಕಾಲೀನ ಸಮಾಜ ಸುಧಾರಕರ ಪಾತ್ರವನ್ನು ಖಂಡಿಸುತ್ತ ಅವರು ಹೀಗೆ ಹೇಳುತ್ತಾರೆ:

''ಸ್ತ್ರೀ-ಸಮಸ್ಯೆಯನ್ನು ಬಗೆಹರಿಸಲು ನೀವಾರು? ನೀವೇನು ದೇವರೆ, ಪ್ರತಿಯೊಬ್ಬ ವಿಧವೆಯನ್ನು, ಸ್ತ್ರೀಯನ್ನು ಆಳುವುದಕ್ಕೆ? ಬದಿಗೆ ಸರಿಯಿರಿ! ಅವರು ತಮ್ಮ ಸಮಸ್ಯೆಯನ್ನು ತಾವೇ ಬಗೆಹರಿಸಿಕೊಳ್ಳುವರು. ಕ್ರೂರಿಗಳೆ, ಇತರರನ್ನು ನಾವು ಉದ್ಧಾರ ಮಾಡುತ್ತೇವೆಯೆಂದು ತಿಳಿಯುವಿರಾ? ಬದಿಗೆ ಸರಿಯಿರಿ!... ನೀವು ಯಾರಿಗೂ ಸಹಾಯ ಮಾಡಲಾರಿರಿ. ಬೇಕಾದರೆ ನೀವು ಸೇವೆ ಮಾಡಬಹುದು. '' *(ಕೃತಿಶ್ರೇಣಿ, ಸಂ.೩, ಪು.೧೨೩-೨೪)*

ಒಂದು ರಾಷ್ಟ್ರದ ಸಮಸ್ಯೆಗಳನ್ನು ಪರಿಹರಿಸಲು ಇರುವ ಸೂಕ್ತ ಸಾಧನವೆಂದರೆ ಸರಿಯಾದ ಶಿಕ್ಷಣ ಎಂದು ಸ್ವಾಮಿ ವಿವೇಕಾನಂದರು ನಂಬುತ್ತಾರೆ. ಅವರ ಪ್ರಕಾರ, ಸ್ತ್ರೀಯರ ಶಿಕ್ಷಣವೆಂದರೆ ತಮ್ಮ ಸಮಸ್ಯೆಗಳನ್ನು ತಾವೇ ಪರಿಹರಿಸಿಕೊಳ್ಳಲು ಸ್ತ್ರೀಯರನ್ನು ಸಬಲರನ್ನಾಗಿಸುವುದು.

ಪ್ರತಿ ಹಳ್ಳಿಯಲ್ಲೂ ಹೆಣ್ಣುಮಕ್ಕಳ ಶಾಲೆಗಳನ್ನು ತೆರೆಯಬೇಕೆಂದು ಸ್ವಾಮೀಜಿ ಆಗ್ರಹಿಸಿದರು. ಅಲ್ಲಿ ವಿಜ್ಞಾನ ಮತ್ತು ಇತರ ವಿಷಯಗಳನ್ನು ಕಲಿಸಬೇಕು. ಸ್ವಾಮೀಜಿಯ ಗಮನ ಮುಖ್ಯವಾಗಿ ಅಡುಗೆ ಕೋಣೆಯಿಂದ ಆಚೆಗೇ ಬಾರದಿದ್ದ ಶೋಷಿತ, ಅವಿವಾಹಿತ, ವಿಧವೆಯರ ಕಡೆಗಿತ್ತು. ಆದ್ದರಿಂದ ಅವರು ಅಂತಹವರನ್ನು ಮೇಲೆತ್ತುವುದಕ್ಕಾಗಿ ಒಂದು ಪ್ರಾಯೋಗಿಕ ಆಲೋಚನೆಯನ್ನು ನೀಡಿದರು. ಈ ಉದ್ದೇಶಕ್ಕಾಗಿ ಮಠಗಳಲ್ಲಿ ಶಿಕ್ಷಣ ಮತ್ತು ತರಬೇತು ಪಡೆದ ಸಂನ್ಯಾಸಿನಿಯರನ್ನು ತಯಾರಿ ಮಾಡಿ ಕಳುಹಿಸಬೇಕೆಂಬುದು ಅವರ ಆಲೋಚನೆಯಾಗಿತ್ತು. ತ್ಯಾಗ-ಸೇವೆಗಳೆಂಬ ಅಸ್ತ್ರಗಳಿಂದ ಸಜ್ಜಾಗಿ ಅವರು ಈ ಕೆಲಸವನ್ನು ಆಧ್ಯಾತ್ಮಿಕ ಕರ್ತವ್ಯವೆಂದೇ ಕೈಗೆತ್ತಿಕೊಳ್ಳಬೇಕು.

ಆಗ ಫಲಿತಾಂಶಗಳು ಉನ್ನತವಾಗಿ ಫಲಿಸಿ, ಸಮಾಜವು ಶೀಘ್ರದಲ್ಲೇ ಸುಧಾರಿಸುತ್ತದೆ. ಇಂತಹ ಶ್ರದ್ಧಾವಂತ ಬೋಧಕಿಯರ ಮೂಲಕ ದೇಶದಲ್ಲಿ ಸ್ತ್ರೀಶಿಕ್ಷಣ ನಿಜಕ್ಕೂ ಹರಡುತ್ತದೆ ಎಂದರು.

ಸ್ತ್ರೀಯರು ನಿಜವಾದ ಅಭಿವೃದ್ಧಿಗೆ ಕಾರಣರಾಗಬೇಕೆಂದು ಸ್ವಾಮೀಜಿ ಉದ್ದೇಶಿಸಿದ್ದರು. ಕುಟುಂಬ, ಸಮಾಜ, ರಾಷ್ಟ್ರ ಎಲ್ಲದರ ಕೇಂದ್ರ, ಸ್ತ್ರೀ ಎಂಬುದು ಸ್ವಾಮೀಜಿಗೆ ತಿಳಿದಿತ್ತು. ಗಂಡು ಮಗುವನ್ನು ಸರಿಯಾಗಿ ಬೆಳೆಸಿದರೆ ಒಬ್ಬ ವ್ಯಕ್ತಿಯನ್ನು ಸರಿಮಾಡಿದಂತೆ. ಆದರೆ ಒಬ್ಬ ಹೆಣ್ಣುಮಗಳನ್ನು ಸರಿಯಾಗಿ ಬೆಳೆಸಿದರೆ ಪ್ರತಿಯಾಗಿ ಅವಳು ತನ್ನ ಮಕ್ಕಳನ್ನು ಸರಿಯಾಗಿ ಬೆಳೆಸುತ್ತಾಳೆ, ಇದರಿಂದ ಇಡೀ ಸಂಸಾರವೇ ಸರಿಯಾಗುತ್ತದೆ. ಅದರಿಂದ ಮನೆಮನೆಯಲ್ಲಿ ನಾಡಿನ ಸಂಸ್ಕೃತಿ, ಜ್ಞಾನ, ಶಕ್ತಿ ಮತ್ತು ತ್ಯಾಗ ಮನೋಭಾವಗಳು ಜಾಗೃತವಾಗುತ್ತವೆ ಎಂದು ಅವರು ನಂಬಿದ್ದರು.

### ಭಾರತದ ಆದರ್ಶ ಸ್ತ್ರೀ

ಸ್ವಾಮಿ ವಿವೇಕಾನಂದರ ರಾಷ್ಟ್ರೀಯತೆಯ ಪರಿಕಲ್ಪನೆಗೆ ತಳಹದಿಯೇ 'ಸ್ತ್ರೀಯರ ಬಗೆಗಿನ ಗೌರವ'ವಾಗಿತ್ತು. 'ಸ್ತ್ರೀಯರನ್ನು ಪೂಜ್ಯಭಾವದಿಂದ ಕಾಣುವುದು' ಭಾರತೀಯ ಧರ್ಮ, ತತ್ತ್ವಶಾಸ್ತ್ರ, ಸಂಸ್ಕೃತಿ ಮತ್ತು ನಾಗರಿಕತೆ ಎಲ್ಲದಕ್ಕೂ ಮೂಲಾಧಾರವಾಗಿದೆ. ಹಿಂದುಗಳು ಸ್ತ್ರೀಯನ್ನು 'ಮಹಾಮಾತೆ'ಯ ಸ್ವರೂಪವೆಂದೇ ಪೂಜಿಸುತ್ತಾರೆ. ಬಾಲ್ಯದಿಂದಲೂ ಸ್ತ್ರೀ ಎಂದರೆ ತಾಯಿ ಎಂದು ಕಲಿಸಲಾಗುತ್ತದೆ. ಸ್ವಾಮಿ ವಿವೇಕಾನಂದರು ಹೇಳುತ್ತಾರೆ:

''ಭರತಖಂಡದಲ್ಲಿ ಆದರ್ಶ ಮಹಿಳೆ ತಾಯಿ. ಮಹಿಳೆ ಮೊದಲು ತಾಯಿ, ಅನಂತರವೂ ತಾಯಿಯೇ. ಹಿಂದೂ ಮನಸ್ಸಿನಲ್ಲಿ ಮಹಿಳೆ ಎಂಬ ಶಬ್ದ ತಾಯಿತನವನ್ನು ನೆನಪಿಗೆ ತರುತ್ತದೆ. ದೇವರನ್ನು ತಾಯಿ ಎಂದು ಕರೆಯುವರು.'' *(ಕೃತಿಶ್ರೇಣಿ, ಸಂ.೭, ಪು.೧೫೨)*

ಸ್ತ್ರೀತ್ವವನ್ನು ಅತ್ಯಂತ ಶ್ರೇಷ್ಠವಾಗಿ ಪ್ರತಿನಿಧಿಸುವುದು ಮಾತೃತ್ವ. ಈ ಮಾತು ಭಾರತಕ್ಕೆ ಮತ್ತಷ್ಟು ವಿಶೇಷವಾಗಿ ಅನ್ವಯಿಸುತ್ತದೆ. ಮಾತೃತ್ವ ಎನ್ನುವುದು ಪ್ರತಿಯೊಬ್ಬ ಸ್ತ್ರೀಯ ಸಹಜ ಸ್ವಭಾವ. ಒಂದು ಪುಟ್ಟ ಮಗುವಿನಲ್ಲೂ ಇದು ಕಂಡುಬರುತ್ತದೆ.

ಪ್ರತಿಯೊಬ್ಬ ಸ್ತ್ರೀಯೂ ಮಹಾಮಾತೆಯ ಸ್ವರೂಪವೇ ಎಂಬ ಕಲ್ಪನೆ ಭಾರತದ ನರನಾಡಿಗಳಲ್ಲೂ ಪ್ರವಹಿಸುತ್ತಿದೆ. ಇದು ರಾಷ್ಟ್ರದ ಆದರ್ಶದ ರೂಪವನ್ನು ತಳೆದಿದೆ. ನಮ್ಮ ದೇಶದಲ್ಲಿ ಸ್ತ್ರೀಯರ ಅಪಮಾನವಾದಾಗಲೆಲ್ಲ ಅಥವಾ ಮಾತೃ ಸ್ವರೂಪಿಣಿಯ ಕಣ್ಣಲ್ಲಿ ನೀರು ಬಂದಾಗಲೆಲ್ಲ ರಾಷ್ಟ್ರಕ್ಕೆ ಬಹುದೊಡ್ಡ ಕೇಡು ಸಂಭವಿಸಿದೆ. ರಾಮಾಯಣ ಮತ್ತು ಮಹಾಭಾರತ ಯುದ್ಧಗಳು ನಡೆಯುವುದಕ್ಕೆ ಕಾರಣವೇ ಸೀತೆ ಮತ್ತು ದ್ರೌಪದಿಯರಿಗಾದ ಅಪಮಾನ. ಹಿಂದೂಗಳು ತಮ್ಮ ನಾಡನ್ನು ಭಾರತ ಮಾತೆ ಎಂದೇ ಪೂಜಿಸುತ್ತಾರೆ. ತಾಯಿ ಮತ್ತು ತಾಯ್ನಾಡನ್ನು ಸ್ವರ್ಗಕ್ಕಿಂತ ಮಿಗಿಲು ಎಂದು ಭಾವಿಸುತ್ತಾರೆ. ವೇದಗಳಲ್ಲೂ ಈ ಭಾವನೆಗಳು ಅಭಿವ್ಯಕ್ತವಾಗಿವೆ. ಹಿಂದೂಗಳ ಕುಟುಂಬದ ಆಧಾರ ಸ್ತಂಭವೇ ತಾಯಿ. ಸ್ವಾಮಿ ವಿವೇಕಾನಂದರು ಹೇಳುತ್ತಾರೆ:

''ತಾಯಿ ಪ್ರೇಮದ ಆದರ್ಶ. ಆಕೆ ಗೃಹವನ್ನು ಆಳುವಳು. ಗೃಹ ಅವಳ ಅಧೀನ.'' *(ಕೃತಿಶ್ರೇಣಿ, ಸಂ.೭, ಪು.೧೫೪)*

ಲ್ಯಾಪೆಲ್ ಗ್ರಿಫಿನ್ ತನ್ನ ಪುಸ್ತಕ 'ಫೇಮಸ್ ವಿಮೆನ್ ಆಫ್ ಇಂಡಿಯಾ'ದ ಪ್ರವೇಶಿಕೆಯಲ್ಲಿ ಹೀಗೆ ಬರೆದಿದ್ದಾನೆ:

''ಪ್ರಾಚ್ಯ ದೇಶದ ಸ್ತ್ರೀಯರು ಯೂರೋಪಿನ ಸ್ತ್ರೀಯರಂತಲ್ಲ, ತಮ್ಮ ಗೃಹ ಸಂಬಂಧಗಳಲ್ಲಿ ಅವರ ಪ್ರಭಾವ ಮಹತ್ತರವಾಗಿದೆ. ಅವರ ನಡವಳಿಕೆ ಮತ್ತು ನೈತಿಕತೆಯೂ ಅಷ್ಟೇ ಉನ್ನತವಾಗಿದೆ.''

ಭಾರತದ ಪುನರುತ್ಥಾನವಾಗಬೇಕಾದರೆ ಸ್ತ್ರೀಯರ ಪುನರುತ್ಥಾನವಾಗಬೇಕು ಎಂದು ಸ್ವಾಮೀಜಿ ನಂಬಿದ್ದರು. ಆ್ಯನಿ ಬೆಸೆಂಟರ ಮಾತುಗಳನ್ನು ಉದ್ಧರಿಸುವುದಾದರೆ:

''ಭಾರತದ ಸ್ತ್ರೀಯರು ವಿಶಾಲವಾದ, ಹೆಚ್ಚಿನ ಸ್ವಾತಂತ್ರ್ಯದ ಮತ್ತು ಪೂರ್ಣ ಬದುಕನ್ನು ಪಡೆಯುವವರೆಗೂ ಭಾರತ ತನ್ನ ಮಾಹಾತ್ಮ್ಯೆಯನ್ನು ಮರಳಿ ಗಳಿಸಲಾರದು. ಭಾರತದ ವಿಮೋಚನೆ ಬಹುಮಟ್ಟಿಗೆ ಸ್ತ್ರೀಯರ ಕೈಗಳಲ್ಲಿದೆ.''

ಮಹಿಳೆಯರ ಸ್ಥಿತಿಯನ್ನು ಕುರಿತು ಪುರಾತನ ಭಾರತದಲ್ಲಿದ್ದ ಸ್ಥಿತಿ ಮರಳಬೇಕೆಂದು ಸ್ವಾಮಿ ವಿವೇಕಾನಂದರು ಆಶಿಸುತ್ತಿದ್ದರು. ಆಗ ಸ್ತ್ರೀಯರು ಅತ್ಯಂತ ಪೂಜ್ಯರಾಗಿದ್ದರು ಮತ್ತು ಅತ್ಯಂತ ಮಹತ್ವದ ಪಾತ್ರವನ್ನು ನಿರ್ವಹಿಸುತ್ತಿದ್ದರು. ಸ್ವಾಮೀಜಿಯವರ ಭವ್ಯವಾದ ಮಾತುಗಳನ್ನು ನೋಡಿ:

''ಹೇ ಭಾರತ! ನಿಮ್ಮ ಸ್ತ್ರೀಯರ ಆದರ್ಶ ಸೀತಾ, ಸಾವಿತ್ರಿ, ದಮಯಂತಿಯರು. ಮರೆಯದಿರಿ. ನೀವು ಪೂಜಿಸುವ ಜಗದೀಶ್ವರನು ತ್ಯಾಗಿಕುಲ ಚೂಡಾಮಣಿ, ಉಮಾವಲ್ಲಭ ಶಂಕರ, ಮರೆಯದಿರಿ... ಮರೆಯದಿರಿ, ನಿಮ್ಮ ಸಾಮಾಜಿಕ ರಚನೆ ಅನಂತ ವಿಶ್ವವ್ಯಾಪಿ ಜಗಜ್ಜನನಿಯ ಕಾಂತಿಯನ್ನು ಪ್ರತಿಬಿಂಬಿಸುವುದಕ್ಕಾಗಿ ಇರುವುದು.'' *(ಕೃತಿಶ್ರೇಣಿ, ಸಂ.೫, ಪು.೪೮-೪೯)*

ಸ್ವಾಮಿ ವಿವೇಕಾನಂದರು ಪ್ರತಿಯೊಬ್ಬ ಸ್ತ್ರೀಯೂ ಸ್ವಾವಲಂಬಿಯಾಗಬೇಕು ಎಂದು ಬಯಸಿದರು.

ಸ್ತ್ರೀಯರಿಗೆ ಶಿಕ್ಷಣ ಒದಗಿಸುವಷ್ಟಕ್ಕೇ ನಮ್ಮ ಕಾರ್ಯ ಸೀಮಿತವಾಗಿರಬೇಕು. ತಮ್ಮ ಸಮಸ್ಯೆಗಳನ್ನು ತಾವೇ ಪರಿಹರಿಸಿಕೊಳ್ಳುವ ಸ್ಥಿತಿಯಲ್ಲಿ ಅವರನ್ನಿರಿಸಬೇಕು. ಮತ್ತಾರೂ ಇದನ್ನು ಅವರಿಗಾಗಿ ಮಾಡಲು ಸಾಧ್ಯವಿಲ್ಲ. ಭಾರತೀಯ ಸ್ತ್ರೀಯರು ಈ ಜಗತ್ತಿನಲ್ಲಿ ತಮ್ಮ ಸಮಸ್ಯೆಗಳನ್ನು ತಮಗೆ ಬೇಕಾದಂತೆ ತಾವೇ ಬಗೆಹರಿಸಿಕೊಳ್ಳಲು ಸಮರ್ಥರಿದ್ದಾರೆ ಎಂಬುದು ಸ್ತ್ರೀ ಪುನರುತ್ಥಾನದ ವಿಚಾರದಲ್ಲಿ ಸ್ವಾಮೀಜಿಯವರ ಖಚಿತ ನಿಲುವಾಗಿತ್ತು.





# ಕಳೆದ ದಿನಗಳ ನೆನಪುಗಳು

(ಸ್ವಾಮಿ ವಿರಜಾನಂದರ ಜೀವನ ಹಾಗೂ ಕೆಲವು ಸಮಕಾಲೀನ ಘಟನೆಗಳು)

ಮೂಲ ಬಂಗಾಳಿ: ಸ್ವಾಮಿ ಶ್ರದ್ಧಾನಂದ

ಅನುವಾದ: ಪ್ರವ್ರಾಜಿಕಾ ಯೋಗಾತ್ಮಪ್ರಾಣಾ

## ಭಾಗ ೨

**ಸೋ**ದರಮಾವ ಅಪೂರ್ವಕೃಷ್ಣ ಮಿತ್ರನು (ಕಾಳೀಕೃಷ್ಣನ ತಾತನ ಏಕೈಕ ಪುತ್ರ) ಅತಿ ಶಾಂತ ಪ್ರಕೃತಿಯವನು ಹಾಗೂ ಮಿತ ಭಾಷಿ. ಸರ್ವದಾ ಓದು, ಬರಹದಲ್ಲಿ ಸಮಯ ಕಳೆಯುತ್ತಿದ್ದ. ಅವನಿಗೆ ಫ್ರೆಂಚ್ ಭಾಷೆ ಕಲಿಯಲು ತುಂಬ ಆಸಕ್ತಿ; ಒಂದು ಬೀರು ಭರ್ತಿ ಫ್ರೆಂಚ್ ಪುಸ್ತಕ ಖರೀದಿಸಿ ಇಟ್ಟಿದ್ದ. ಮಾವನ ಮನೆಯಲ್ಲಿದ್ದಾಗ ಆತನೇ ಕಾಳೀಕೃಷ್ಣನನ್ನು ಓದಿಸುತ್ತಿದ್ದ. ದಾಯಾದಿಯಾದ ಭೂತನಾಥ ಮಿತ್ರನು ಮಾವನ ಮನೆಯಲ್ಲಿ ಕಾಳೀಕೃಷ್ಣನ ಸಹಪಾಠಿ. ಆ ಹುಡುಗನ ಅಡ್ಡ ಹೆಸರು 'ಭೂತೋ' ಎಂದು. ಅಂತಹ ಶಾಂತ ಪ್ರಕೃತಿಯ ಮಾವನೂ ಸಹ ಓದದಿದ್ದರೆ ಬೆತ್ತ ತೆಗೆದುಕೊಂಡು ರಪ ರಪ ಬಾರಿಸುತ್ತಿದ್ದ. ಭೂತೋ ಬೆತ್ತ ನೋಡಿದೊಡನೆಯೇ ಕಾಲು ಕೀಳುತ್ತಿದ್ದ, ಇಲ್ಲವೆ ಏಟು ತಿಂದು ಒದ್ದಾಡುತಿದ್ದ. ಮಾವ ನನ್ನು ಕಂಡಾಗ ಯಮನನ್ನೇ ಕಂಡಂತಾಗುತ್ತಿತ್ತು. ಆ ಮಾವ ೧೯೧೨ರಲ್ಲಿ ಮೃತ್ಯುವಶನಾದ. ಅಷ್ಟು ಹೊತ್ತಿಗಾಗಲೇ ಕಾಳೀಕೃಷ್ಣ ಸಂನ್ಯಾಸಿಯಾಗಿದ್ದ.

ಕಾಳೀಕೃಷ್ಣ ತಂದೆಯ ಸ್ನೇಹಿತರಾದ ಹೇಮಬಾಬುಗಳ ಟ್ರೈನಿಂಗ್ ಅಕಾಡೆಮಿಯಲ್ಲಿ ೬ನೇ ತರಗತಿಯವರೆಗೆ ಓದಿ, ನಂತರ ರಿಪ್ಪನ್ ಶಾಲೆಗೆ ಸೇರಿದ. ಶಾಲಾಜೀವನದಲ್ಲಿ ಉಳಿದ ವರ್ಷಗಳು ಇಲ್ಲಿಯೇ ಕಳೆದವು. ಶಾಲೆಯ ವಿದ್ಯಾಭ್ಯಾಸವಲ್ಲದೆ ಮನೆಯಲ್ಲಿಯೂ ಅದರ ಪರಿಧಿ ವಿಸ್ತರಿಸಿತ್ತು. ಕಾಳೀಕೃಷ್ಣನಿಗೀಗ ಅಡುಗೆಯಲ್ಲಿ ಆಸಕ್ತಿ ಬೆಳೆದಿತ್ತು. ಪಾಕಶಾಸ್ತ್ರದ ಪುಸ್ತಕವನ್ನು ಓದಿಕೊಂಡು, ಮಾಂಸ ಹಾಗೂ ಸಿಹಿತಿಂಡಿ ತಯಾರಿಕೆಯ ಪ್ರಯೋಗ ನಡೆಯುತ್ತಿತ್ತು. ಪೇಟೆಗೆ ಹೋಗುವ ಜವಾಬ್ದಾರಿಯನ್ನು ಆನಂದದಿಂದ ತಾನೇ ವಹಿಸಿಕೊಳ್ಳುತ್ತಿದ್ದ. ಅಂಗಡಿಯವನಿಂದ ಮೋಸ ಹೋಗದೆ, ಹತ್ತಾರು ಕಡೆ ವಿಚಾರಿಸಿ, ಅತಿ ಕಡಿಮೆ ಬೆಲೆಗೆ ಸಾಮಾನು ಖರೀದಿಸಿ ತರುತ್ತಿದ್ದುದು ಪ್ರಶಂಸನೀಯ ಕೆಲಸವೇ ಸರಿ. ಅಜ್ಜನಾದ ವಿನೋದ ವಿಹಾರಿಯು ಮೃತನಾದಾಗ ಕಾಳೀಕೃಷ್ಣನಿಗೆ ೧೨ ವರ್ಷ. ಅಜ್ಜನ ಶ್ರಾದ್ಧಕ್ಕೆ ಬೇಕಾದ ಬೇಳೆ-ಕಾಳು, ತರಕಾರಿ, ಮಾವಿನಹಣ್ಣು ಇತ್ಯಾದಿಗಳನ್ನು ತರುವ ಜವಾಬ್ದಾರಿ ಈ ಹುಡುಗನ ಮೇಲೇ ಬಿದ್ದಿತ್ತು. ಮಂಡಿಯಿಂದ ಅತ್ಯಂತ ಕಡಿಮೆ ಬೆಲೆಗೆ ಎಲ್ಲ ಸಾಮಾನುಗಳನ್ನು ಖರೀದಿಸಿ ತಂದದ್ದನ್ನು ಕಂಡು ಎಲ್ಲರೂ ಅಚ್ಚರಿಪಟ್ಟಿದ್ದರು.

ಕಾಳೀಕೃಷ್ಣ ನ ಆರೈಕೆಯಲ್ಲಿ ಅಂಗಳದ ಹೂತೋಟ ಚೆನ್ನಾಗಿ ಕಂಗೊಳಿಸುತ್ತಿತ್ತು. ನಾನಾ ಆಕಾರದ ಮಡಿಗಳಲ್ಲಿ ಆಯಾ ಋತುವಿಗೆ ತಕ್ಕ ಹೂಗಳನ್ನು ಹಾಕಲಾಗುತ್ತಿತ್ತು. ತಾಯಿ, ''ಕಾಳಿ ನನ್ನ ಹಿರಿಯ ಮಗಳಿದ್ದಂತೆ. ಸಂಸಾರದ ಎಲ್ಲ ಕಡೆಗೂ ಅವನ ತೀಕ್ಷ್ಣ ದೃಷ್ಟಿಯಿದೆ'' ಎಂದು ಹೇಳುತ್ತಿದ್ದಳು. ಅವನ ಕೆಲಸವೆಲ್ಲವೂ ತುಂಬ ಅಚ್ಚುಕಟ್ಟು. ತಲೆಗೂದಲನ್ನು ಚೆನ್ನಾಗಿ ಬಾಚಿರಬೇಕು; ಆದರೆ ತಿನ್ನಲು ಮಾತ್ರ ಸ್ವಲ್ಪ ಹೆಚ್ಚು ಸಮಯ ಹಿಡಿಯುತ್ತಿತ್ತು. ತಂದೆ ತ್ರೈಲೋಕ್ಯನಾಥರಿಗೂ ಅದೇ ಸ್ವಭಾವವಿತ್ತು; ಸಾವಿರ ಕೆಲಸಗಳಿದ್ದರೂ ಒಂದು ಗಂಟೆಗೆ ಮುಂಚೆ ಊಟ ಮುಗಿಯುತ್ತಿರಲಿಲ್ಲ.



ಮತ್ತೊಂದು ಅಭ್ಯಾಸ ಕಾಳೀಕೃಷ್ಣನಿಗೆ ಬಾಲ್ಯದಿಂದಲೂ ಇತ್ತು. ಅದು ವೇಗವಾಗಿ ನಡೆಯುವುದು. ನಡೆಯಲು ಪ್ರಾರಂಭಿಸುತ್ತಿದ್ದಂತೆಯೇ ಸರಸರನೆ ವೇಗ ಹೆಚ್ಚಾಗುತ್ತಿತ್ತು. ಒಮ್ಮೆ ತಾಯಿಗೆ ಪುರಿ ಜಗನ್ನಾಥನ ದರ್ಶನ ಮಾಡುವ ಸುಯೋಗ ಒದಗಿ ಬಂದಿತ್ತು. ಆ ಕಾಲಲ್ಲಿ ಅಲ್ಲಿಗೆ ಸ್ಟೀಮರಿನಲ್ಲಿ ಹೋಗಬೇಕಾಗುತ್ತಿತ್ತು. ಆದರೆ ಆಗ ಆಕೆಗೆ ಎರಡು ವರ್ಷದ ಮಗಳಿದ್ದುದರಿಂದ ತಂದೆ ಹೋಗಬೇಡವೆಂದಿದ್ದರು. ತಾಯಿ, ''ಮಗುವನ್ನು ಕಾಳಿ ನೋಡಿಕೊಳ್ಳುತ್ತಾನೆ'' ಎಂದು ಹೇಳಿ ಅವನಿಗೆ ಜವಾಬ್ದಾರಿ ವಹಿಸಿ ಹೊರಟುಹೋದರು. ಹಿರಿಯಣ್ಣನ ಆರೈಕೆ, ಆದರಗಳನ್ನು ಪಡೆದ ಮಗುವಿಗೆ ತಾಯಿ ಇಲ್ಲದಿರುವುದು ಗೊತ್ತೇ ಆಗಿರಲಿಲ್ಲ.

ಕಾಳೀಕೃಷ್ಣನ ನಿವಾಸವು ಆಮಹರ್ಸ್ಟ್ ಸ್ಟ್ರೀಟಿನಲ್ಲಿದ್ದಾಗ, ಅಲ್ಲಿಯೇ ಇದ್ದ ವಿಖ್ಯಾತರಾದ ರಾಜಾರಾಮ್ ಮೋಹನ್ ರಾಯ್‌ನ ಮೊಮ್ಮಗ ಹರಿಮೋಹನ್ ರಾಯ್‌ನ ವಿಷಯ ನೆನಪಿಗೆ ಬರುತ್ತದೆ. ಹರಿಮೋಹನನದು ವಿಚಿತ್ರ ಸ್ವಭಾವ; ಸ್ವತಂತ್ರ ಪ್ರಕೃತಿ. ಮಹಾ ಉದ್ಯಮಶೀಲ, ಆದರೆ ತನ್ನ ಮರ್ಜಿಯಂತೆಯೇ ನಡೆಯುವ ಮನೋಭಾವ. ಮದ್ಯ ಕುಡಿಯುತ್ತಿದ್ದನಾದರೂ ಎಚ್ಚರ ತಪ್ಪುತ್ತಿರಲಿಲ್ಲ. ಅವನು ವೈದ್ಯನಾದ್ದರಿಂದ ತ್ರೈಲೋಕ್ಯನಾಥನೊಂದಿಗೆ ಹೆಚ್ಚಿನ ಸ್ನೇಹವಿತ್ತು. ತನ್ನ ಮನೆಯಲ್ಲೇ ಮೃಗಾಲಯವೊಂದನ್ನು ಇಟ್ಟಿದ್ದ. ಅದಕ್ಕೆ ಒಂದಾಣೆಯಂತೆ ಟಿಕೇಟು. ಕಾಳೀಕೃಷ್ಣ ಮೊದಲಾದವರನ್ನು ಅವನು ತುಂಬ ಪ್ರೀತಿಸುತ್ತಿದ್ದ. ಅವರುಗಳಿಗೆಲ್ಲ ಮೃಗಾಲಯ ನೋಡಲು ಸದಾ ಸ್ವಾಗತವಿತ್ತು. ಒಂದು ದಿನ ಹರಿಮೋಹನ ಕುಡಿದ ಅಮಲಿನಲ್ಲಿ ಸಿಂಹದ ಬೋನಿಗೆ ಒರಗಿ ಕೂರಲು ಹೊರಟ; ಯಾರ ಮಾತನ್ನೂ ಕೇಳಲೊಲ್ಲ. 'ಏನು! ನನ್ನ ಸಿಂಹ ನನ್ನನ್ನೇ ಕಡಿಯುವುದೆ?' ಎನ್ನುತ್ತ ಕುಳಿತುಕೊಳ್ಳುತ್ತಿದ್ದಂತೆಯೆ, ಮೃಗರಾಜ ತನ್ನ ಪಂಜಾಗಳನ್ನು ಅವನ ಬೆನ್ನ ಮೇಲೆ ಊರಿಯೇಬಿಟ್ಟ. ತಕ್ಷಣ ಹರಿಮೋಹನನು, ''ಬೇಗ ಉಪ್ಪನ್ನು ಸವರಿ'' ಎಂದು ಚೀರಿದ. ಅಲ್ಲದೆ ಕೋಪದಿಂದ ಸಾವಿರಾರು ರೂಪಾಯಿ ಬೆಲೆಬಾಳುವ ಮೃಗಾಲಯವನ್ನು ಸ್ವಲ್ಪ ಹಣಕ್ಕೆ ಮಾರಿಬಿಟ್ಟ.

ಅನಂತರ ತರಕಾರಿ, ಮೀನಿನ ಮಾರುಕಟ್ಟೆಯನ್ನು ತನ್ನ ಮನೆಯಂಗಳದಲ್ಲೇ ಪ್ರಾರಂಭಿಸಿದ. ಮಾರಾಟಗಾರರು ಅವನಿಗೇನೂ ಸುಂಕ ಕೊಡಬೇಕಾಗಿರಲಿಲ್ಲ. ದೊಡ್ಡ ದೊಡ್ಡ ಜಮೀನುಗಳಿಂದ ಸೊಪ್ಪು- ತರಕಾರಿ ಹಾಗೂ ದೊಡ್ಡ ಮುರಗೋಡು ಮೀನುಗಳನ್ನು ತರಿಸಿ ಮಾರಾಟ ಮಾಡಿಸುತ್ತಿದ್ದ. ಹಾಗೂ ತಾನೇ ಸ್ವತಃ ಅವುಗಳ ಲೆಕ್ಕವಿಡುತ್ತಿದ್ದ. ಆತನು ರಸ್ತೆಯ ಮುಂದೆ ಮೇಜು-ಕುರ್ಚಿಗಳನ್ನು ಇಟ್ಟುಕೊಂಡು ಪುಸ್ತಕ-ಲೇಖನಿ ಹಿಡಿದು ಕುಳಿತಿರುವುದನ್ನು ಕಾಣಬಹುದಿತ್ತು. ಮನೆಯಲ್ಲಿ ಒಂದು ಉಚಿತ ಚಿಕಿತ್ಸಾಲಯವನ್ನೂ ತೆರೆದು ತ್ರೈಲೋಕ್ಯನಾಥನನ್ನು ಅಲ್ಲಿಗೆ ವೈದ್ಯನನ್ನಾಗಿ ನೇಮಿಸಿದ್ದ.

ಹರಿಮೋಹನ ತುಂಬ ಉದಾರಿ, ಇಚ್ಛೆ ಬಂದಂತೆ ದಾನ ಮಾಡುತ್ತಿದ್ದ; ಆತ ಮನಸ್ಸಿಗೆ ಬಂದಂತೆ ನಡೆಯುವ 'ನವಾಬ'. ಅವನು ಬಯಲಾಟದ ಗುಂಪೊಂದನ್ನು ಸ್ವತಃ ಕಟ್ಟಿದ್ದ. ತಾನೇ ನಾಟಕಗಳನ್ನು ರಚಿಸಿ, ಹಾಡುಗಳನ್ನೂ ಕಟ್ಟುತ್ತಿದ್ದ. ಯಾರಾದರೂ ಬಯಲಾಟಕ್ಕೆ ಕರೆದರೆ ಸ್ವತಃ ತಾನೇ ಹೋಗಿ ನಡೆಸಿಕೊಡುತ್ತಿದ್ದ. ಒಮ್ಮೆ ಕಾಳೀಕೃಷ್ಣನ ಚಿಕ್ಕಮ್ಮನ ಮಾವನಾದ ಶ್ರೀನಾಥ್ ದಾಸ್‌ರವರ ಮನೆಯಲ್ಲಿ 'ಹರಿಶ್ಚಂದ್ರ' ನಾಟಕವನ್ನು ಆಡಿಸಲಾಯಿತು. ಅಭಿನಯವು ತುಂಬ ಹೃದಯಂಗಮವಾಗಿತ್ತು. ಕಾಳೀಕೃಷ್ಣನೂ ಅದನ್ನು ನೋಡಿದ್ದನು. ಲೆಫ್ಟಿನೆಂಟ್ ಗವರ್ನರನು ನಾಲ್ಕು ಕುದುರೆಗಳುಳ್ಳ ಫೀಟನ್ ಗಾಡಿಯಲ್ಲಿ ಓಡಾಡುತ್ತಿದ್ದುದನ್ನು ಕಂಡು ಹರಿಮೋಹನನು, 'ನಾನು ಯಾರಿಗೇನು ಕಡಿಮೆ?' ಎಂಬ ಗತ್ತಿನಿಂದ ಒಂದು ದೊಡ್ಡ ಮಹಡಿಯ ಗಾಡಿ ಮಾಡಿಸಿ, ಅದಕ್ಕೆ ಎಂಟು ಕುದುರೆಗಳನ್ನು ಹೂಡಿ, ಅದರಲ್ಲಿ ಬಯಲಾಟದ ಗುಂಪನ್ನು ಕರೆದೊಯ್ದ. ವಾದ್ಯಗಳೊಂದಿಗೆ ಹಾಡುತ್ತ ಇಡೀ ಪಟ್ಟಣವನ್ನು ಸುತ್ತಿದ. ಯಾರಾದರೂ ಅವನನ್ನು ಮೀರಿಸಿ ಹೋಗುವುದನ್ನು ಅವನು ಸಹಿಸುತ್ತಿರಲಿಲ್ಲ. ವೈ.ಎಸ್.ಎನ್. ಕಂಪೆನಿಯೊಂದಿಗೆ ಸ್ಪರ್ಧಿಸಿ, ಒಮ್ಮೆ ಗೇವ್‌ಖಾಲಿಗೆ ಹೋಗಿಬರುವ ಸ್ಟೀಮರ್ ಸಾರಿಗೆಯನ್ನು ಪ್ರಾರಂಭಿಸಿದ್ದನು. ಎಂಟಾಣೆಯ ಬದಲಿಗೆ ಎರಡಾಣೆ ಬಾಡಿಗೆ. ಆದರೂ ಆ ಕಂಪನಿಯನ್ನು ಹಿಂದೆ ಹಾಕಲಾಗದೇ ಪ್ರಕಟಣೆಯೊಂದನ್ನು ಹೊರಡಿಸಿದ್ದ. ತನ್ನ ಸ್ಟೀಮರಿನಲ್ಲಿ ಪ್ರಯಾಣಿಕರು ಬಿಟ್ಟಿಯಾಗಿ ಪ್ರಯಾಣಿಸಬಹುದು, ಅಲ್ಲದೆ ಎಲ್ಲರಿಗೂ ಒಂದು ದೊನ್ನೆ 'ಸಂದೇಶ' (ಬಂಗಾಳದ ಒಂದು ಸಿಹಿತಿಂಡಿ) ಕೊಡಲಾಗುವುದು ಎಂದು. ಕೆಲವು ಸಹಪಾಠಿಗಳೊಂದಿಗೆ ಕಾಳೀಕೃಷ್ಣನೂ ಸಹ ಆ ಸ್ಟೀಮರ್‌ನಲ್ಲಿ ಗೇವ್‌ಖಾಲಿಗೆ ಹೋಗಿ ಸುತ್ತಾಡಿಕೊಂಡು ಬಂದಿದ್ದನು. ಪ್ರಪಂಚದಲ್ಲಿ ಎಷ್ಟು ರೀತಿಯ 'ಖಯಾಲಿ' (ಚಟ)ಗಳಿರಬಹುದೋ ಅವುಗಳನ್ನೆಲ್ಲಾ ಹರಿಮೋಹನನು ಈಡೇರಿಸಿಕೊಂಡಿದ್ದನು. ಆದರೆ ಅವನ ನಡವಳಿಕೆ ನಿಷ್ಕಳಂಕವಾಗಿತ್ತು. ಅವನು ಸ್ತ್ರೀಯರನ್ನು ಗೌರವಿಸುತ್ತಿದ್ದನು. ಅಗಾಧ ಧನಸಂಪತ್ತನ್ನು ತನ್ನ ಮರುಳು ಚಪಲಗಳಲ್ಲಿ ಉಡಾಯಿಸಿಬಿಟ್ಟಿದ್ದನು. ಒಮ್ಮೆ ಒಬ್ಬ ಬ್ರಾಹ್ಮಭಕ್ತ ಅವನನ್ನು, ''ನೀವು ಅಂತಹ ಮಹಾಪುರುಷನ ವಂಶಸ್ಥನಾಗಿದ್ದರೂ ಹೀಗೆ ಲಂಗುಲಗಾಮಿಲ್ಲದ ಜೀವನ ನಡೆಸುತ್ತಿರುವಿರಾ?'' ಎಂದು ಕೇಳಿಯೇ ಬಿಟ್ಟ. ಅದಕ್ಕೆ ಹರಿಮೋಹನ್ ರಾಯ್ ''ಹ್ಞಾ! ಅವರು ಮೂವತ್ತಮೂರು ಕೋಟಿ ದೇವದೇವಿಯರನ್ನು 'ವರದೋವಾಽದ್ವಿತೀಯಂ' (ನಿರಾಕಾರ ಬ್ರಹ್ಮ)ನಲ್ಲಿ ಐಕ್ಯಗೊಳಿಸಿದ್ದರು. ನಾನು ಆ ಒಂದನ್ನೂ ಹಾರಿಸಿಬಿಟ್ಟೆ'' ಎಂದು ಉತ್ತರಿಸಿದ್ದ.

ಕಾಳೀಕೃಷ್ಣನ ವಯಸ್ಸು ಕಿಶೋರಾವಸ್ಥೆಯನ್ನು ದಾಟುತ್ತಿತ್ತು. ಅವನಿಗೆ ಓದುಬರಹದಲ್ಲಿ ಆಸಕ್ತಿ; ತಾಯಿಯ ಜೊತೆಜೊತೆಗಿದ್ದು ಹುಡುಗಿಯರಂತೆ ಅಡಿಗೆ, ಗೃಹಕೃತ್ಯ ಹಾಗೂ ಕೈಕೆಲಸದಲ್ಲಿ ಅಭಿರುಚಿಯಿದ್ದು, ನೈಪುಣ್ಯತೆಯನ್ನೂ ಗಳಿಸಿದ್ದ. ತಮ್ಮ-ತಂಗಿಯರಿಗೆ ಅಗಾಧ ವಾತ್ಸಲ್ಯವಿತ್ತ. ಜನ್ಮತಃ ಬಂದ ಶಾಂತಭಾವಗಳು ಅವನಲ್ಲಿ ಅರಳಿ ನಿಂತಿದ್ದವು. ಈ ರೀತಿಯ ಸ್ವಭಾವವುಳ್ಳವನ ಭವಿಷ್ಯವು

ಏನಾಗುವುದೆಂದು ಕಲ್ಪಿಸಿಕೊಳ್ಳುವುದು ತಾಯಿ-ತಂದೆಯರಿಗಾಗಲಿ, ಶಿಕ್ಷಕರಿಗಾಗಲಿ, ಆತ್ಮೀಯರಿಗಾಗಲಿ ಕಷ್ಟವಿರಲಿಲ್ಲ. ಅವರ ಪ್ರಕಾರ ಆಗಿನ್ನೂ ಹದಿನಾಲ್ಕು ವರ್ಷದವನಾಗಿದ್ದ ಕಾಳೀಕೃಷ್ಣನ ಭವಿಷ್ಯ ಚಿತ್ರ 'ಕೃತಕೃತ್ಯನೂ, ವಿದ್ಯಾವಿಶಾರದನೂ, ಸಚ್ಚರಿತ್ರನೂ, ಸಭ್ಯನೂ ಆದ ಸದ್ಗೃಹಸ್ಥ' ಎಂಬುದೇ ಆಗಿತ್ತು.

ಆದರೆ ಮನುಷ್ಯನ ಮನಸ್ಸಿನಾಳದಲ್ಲಿ ಅದೆಷ್ಟು ಬಗೆಯ ಸಂಸ್ಕಾರಗಳು ಸುಪ್ತವಾಗಿರುತ್ತವೆಯೋ ಯಾರಿಗೆ ಗೊತ್ತು? ಅವು ಮೇಲೆದ್ದು ಬರುವವರೆಗೂ ಅವುಗಳ ಸುಳಿವು ಎಳ್ಳಷ್ಟೂ ಸಿಗುವುದಿಲ್ಲ. ತನ್ನ ಜೀವನ ಇತರ ಸಾವಿರಾರು ಮನುಷ್ಯರ ಜೀವನದಂತೆ ಸಾಗದೆ, ಸಂಪೂರ್ಣವಾಗಿ ವಿರುದ್ಧ ದಿಕ್ಕಿನಲ್ಲೇ ಸಾಗಬೇಕೆಂದು ನಿರ್ಣಯಿಸಲ್ಪಟ್ಟಿದೆ ಎಂದು ಯೌವನಕ್ಕೆ ಕಾಲಿಡುತ್ತಿದ್ದ ಕಾಳೀಕೃಷ್ಣನು ಎಂದಾದರೂ ಭಾವಿಸಿದ್ದನೆ? ತನ್ನ ಜೀವನ ಬೇರೆ ಹಾದಿಯಲ್ಲೇ ಸಾಗುತ್ತಿದೆ ಎಂಬುದು ಗಮನಕ್ಕೆ ಬಂದಾಗ ಅವನು ಬಹಳ ಅಚ್ಚರಿಪಟ್ಟನು; ಅವನ ಹತ್ತಿರದ ಸಂಬಂಧಿಗಳ ವಿಸ್ಮಯಕ್ಕಂತೂ ಪಾರವೇ ಇರಲಿಲ್ಲ. ತಾಯಿಯ ಸೆರಗು ಹಿಡಿದು ನಡೆಯುವ, ಅತಿ ಸಂಕೋಚ ಸ್ವಭಾವದ ಈ ಹುಡುಗನ ಅಂತರಂಗದಲ್ಲಿ ಅಡಗಿದ್ದ ವೈರಾಗ್ಯಾನಲವು ಇವನು ಒಂಬತ್ತನೆಯ ತರಗತಿಯಲ್ಲಿ ಓದುವಾಗ ಒಬ್ಬ ತೇಜಸ್ವಿಯಾದ ಸಹಪಾಠಿಯ ಸಂಸರ್ಗದಿಂದ ಭುಗಿಲೆದ್ದಿತು.

೨

ಆ ತೇಜಸ್ವಿ ತರುಣನ ಹೆಸರು ಖಗೇಂದ್ರನಾಥ ಚಟ್ಟೋಪಾಧ್ಯಾಯ. ಇವರೇ ಮುಂದೆ ಸ್ವಾಮಿ ವಿವೇಕಾನಂದರ ಶಿಷ್ಯರಲ್ಲೊಬ್ಬರಾದ ಸ್ವಾಮಿ ವಿಮಲಾನಂದರು. ತೆಳುವಾದ ಮೈಕಟ್ಟು ಹೊಂದಿದ್ದರೂ ಅವನ ಮುಖಮಂಡಲದಲ್ಲಿ ಇದ್ದ ಅಸಾಧಾರಣ ಚೆಲುವು ಸಹಜವಾಗಿಯೇ ಎಲ್ಲರ ದೃಷ್ಟಿಯನ್ನು ಆಕರ್ಷಿಸುತ್ತಿತ್ತು. ಕಣ್ಣುಗಳಲ್ಲಿ ಪ್ರಖರವಾದ ಮೇಧಾಶಕ್ತಿ ಹೊರಹೊಮ್ಮುತ್ತಿತ್ತು. ಅವನದು ಶಾಂತ ಸ್ವಭಾವ, ಅವನ ನುಡಿ ಮಧುರ ಮತ್ತು ಸಹಜವಾಗಿಯೇ ಎಲ್ಲರೊಡನೆ ಬೆರೆಯುವ ಪ್ರಕೃತಿ. ತಾನಾಗಿಯೇ ಯುವಕರಿದ್ದೆಡೆಗೆ ಹೋಗಿ, ಮಾತನಾಡಿ, ಸ್ವಲ್ಪ ಸಮಯದಲ್ಲಿಯೇ ಅವರನ್ನು ತನ್ನವರನ್ನಾಗಿ ಮಾಡಿಕೊಳ್ಳುತ್ತಿದ್ದ. ಖಗೇನನು ಕಟ್ಟಾ ನೀತಿವಂತ. ಇವನನ್ನು ಕೇಂದ್ರವಾಗಿರಿಸಿಕೊಂಡು ಹುಡುಗರ ಒಂದು ಬಳಗವೇ ಬೆಳೆದಿತ್ತು. ಅವರೊಡನೆ ಈತ ಸದಾಚಾರ, ಬ್ರಹ್ಮಚರ್ಯ, ಉನ್ನತ ಆದರ್ಶ, ನಿಷ್ಠೆ ಇವುಗಳ ಬಗ್ಗೆ ಚರ್ಚಿಸುತ್ತಿದ್ದ, ಜೀವನದಲ್ಲೂ ಅವನ್ನು ತಾನು ಅನುಸರಿಸುತ್ತಿದ್ದ. ಆಧ್ಯಾತ್ಮಿಕ ಜೀವನದ ಬಗ್ಗೆಯೂ ಅವನಿಗೆ ಪ್ರಬಲವಾದ ಸೆಳೆತ. ಎಲ್ಲಿಯಾದರೂ ಸಾಧು-ಸಂನ್ಯಾಸಿಗಳಿದ್ದಾರೆಂದು ತಿಳಿದುಬಂದರೆ, ಅವರನ್ನು ಹುಡುಕಿಕೊಂಡು ಹೋಗಿ ಅವರ ಸತ್ಸಂಗ ಮಾಡುತ್ತಿದ್ದ. ಅವರು ನಿಜವಾದ ಸಾಧು ಎಂದೆನಿಸಿದರೆ ತನ್ನ ಬಳಗವನ್ನೂ ಕರೆದೊಯ್ಯುತ್ತಿದ್ದ. ಖಗೇನನ ತೇಜಸ್ಸು, ನಿಷ್ಕಾಪಟ್ಯ ಹಾಗೂ ನಿಃಸ್ವಾರ್ಥ ಪವಿತ್ರ ಪ್ರೀತಿಯು ಆತನ ವ್ಯಕ್ತಿತ್ವದಲ್ಲಿ ಒಂದು ರೀತಿಯ ಶಕ್ತಿಯನ್ನು ಜಾಗೃತಗೊಳಿಸಿತ್ತು. ಅಯಸ್ಕಾಂತವು ಕಬ್ಬಿಣವನ್ನು ತನ್ನೆಡೆಗೆ ಆಕರ್ಷಿಸುವಂತೆ ಅವನ ವ್ಯಕ್ತಿತ್ವ ತರುಣರನ್ನು ತನ್ನೆಡೆಗೆ ಸೆಳೆದು ತರುತ್ತಿತ್ತು.

ಮೃದು ಸ್ವಭಾವದ ಹಾಗೂ ಲಜ್ಜಾಶೀಲನಾದ ಕಾಳೀಕೃಷ್ಣನಿಗೂ ಈ ಆಕರ್ಷಣೆಯನ್ನು ನಿರ್ಲಕ್ಷ್ಯ ಮಾಡಲು ಸಾಧ್ಯವಾಗಲಿಲ್ಲ. ಇವರಿಬ್ಬರಲ್ಲಿ ಮಾತುಕತೆ ಬೆಳೆಯುತ್ತ ಗಾಢ ಸ್ನೇಹವಾಗಿ ಪರಿಣಮಿಸಿತು. ಖಗೇನನಿಗೆ ನೈತಿಕ ಆದರ್ಶವಂತೂ ಮೊದಲೇ ಇತ್ತು. ಅದರೊಂದಿಗೆ ಈಗ ಆಧ್ಯಾತ್ಮಿಕ ಒಲವೂ ಬೆಸೆಯಿತು. ಇಬ್ಬರೂ ಪರಸ್ಪರರ ಮನೆಗೆ ಹೋಗಿಬರುವುದು ರೂಢಿಯಾಯಿತು. ಕಾಳೀಕೃಷ್ಣನ ತಂದೆ-ತಾಯಿಯರು ಖಗೇನನನ್ನು ಸ್ವಂತ ಮಗನಂತೆಯೇ ಪ್ರೀತಿಸುತ್ತಿದ್ದರು. ಕಾಳೀಕೃಷ್ಣನೂ ಸಹ ಖಗೇನನ ಮನೆಗೆ ಬಂದಾಗಲೆಲ್ಲ ಅತಿ ಆತ್ಮೀಯವಾದ ಆದರ, ಸ್ನೇಹಗಳು ಎದುರುಗೊಳ್ಳುತ್ತಿದ್ದವು. ಪ್ರಾಯಶಃ ದಿನವೂ ಸಂಜೆ ಖಗೇನ ಕಾಳೀಕೃಷ್ಣನ ಮನೆಗೆ ಹೋಗಿಬರುತ್ತಿದ್ದ. ಇಬ್ಬರೂ ಸದ್ವಿಚಾರ ಮಾಡುತ್ತ ನಡೆದುಕೊಂಡು ಪಟೋಲ್‌ಡಂಗಾದಲ್ಲಿರುವ ಖಗೇನನ ಮನೆಗೆ ತಲುಪುತ್ತಿದ್ದರು. ನಂತರ ಖಗೇನ ಕಾಳೀಕೃಷ್ಣನನ್ನು ಮತ್ತೆ ಸ್ವಲ್ಪ ದೂರ ಬಿಟ್ಟುಬರಲು ಹೋಗಿ, ಕಡೆಗೆ ನಾರಿಕೇಲ್‌ಡಂಗಾ ವರೆಗೂ ಬರುತ್ತಿದ್ದ. ಅವರು ಚರ್ಚಿಸುತ್ತಿದ್ದ ಉನ್ನತ ವಿಚಾರಗಳು ಅದೆಷ್ಟು ಕುತೂಹಲಕರವಾಗಿತ್ತೆಂದರೆ, ಕಾಳೀಕೃಷ್ಣನು ಪುನಃ ಖಗೇನನನ್ನು ಸ್ವಲ್ಪ ದೂರದವರೆಗೂ ಬಂದು ಬೀಳ್ಕೊಡುತ್ತಿದ್ದ.

ಸ್ವಲ್ಪ ದಿನಗಳಲ್ಲೇ ಇಬ್ಬರೂ ಎಂಟ್ರೆನ್ಸ್ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ರಿಪ್ಪನ್ ಕಾಲೇಜನ್ನು ಸೇರಿದರು. ಅಷ್ಟರಲ್ಲಿ ಅವರ ಬಳಗವೂ ಚೆನ್ನಾಗಿಯೇ ಪುಷ್ಟಿಗೊಂಡಿತ್ತು. ಮುಖ್ಯವಾಗಿ ಪಟೋಲ್‌ಡಂಗಾದಲ್ಲಿರುವ ಖಗೇನನ ಮನೆಯೇ ಎಲ್ಲರೂ ಸೇರುವ ಕೇಂದ್ರವಾಗಿತ್ತು. ಧರ್ಮಗ್ರಂಥಗನ್ನು ಓದುವುದು, ಭಜನೆ, ಸಂಕೀರ್ತನೆ, ಆಧ್ಯಾತ್ಮಿಕ ವಿಷಯಗಳ ಚರ್ಚೆ ಇವೆಲ್ಲವೂ ಭರದಿಂದ ಸಾಗಿದ್ದವು.

ಖಗೇನ್, ಕಾಳೀಕೃಷ್ಣರಲ್ಲದೆ ಅವರ ಗುಂಪಿನಲ್ಲಿದ್ದ ಇತರ ಮುಖ್ಯ ಜೊತೆಗಾರರೆಂದರೆ ಖಗೇನನ ಚಿಕ್ಕಪ್ಪನ ಮಗ ಹರಿಪದ ಚಟ್ಟೋಪಾಧ್ಯಾಯ (ಮುಂದೆ ಸ್ವಾಮಿ ಬೋಧಾನಂದ), ಸುಧೀರ ಚಂದ್ರ ಚಕ್ರವರ್ತಿ (ಮುಂದೆ ಸ್ವಾಮಿ ಶುದ್ಧಾನಂದ), ಸುಶೀಲ ಚಕ್ರವರ್ತಿ (ಸುಧೀರನ ತಮ್ಮ, ಮುಂದೆ ಸ್ವಾಮಿ ಪ್ರಕಾಶಾನಂದ), ಗೋವಿಂದ ಶುಕುಲ್ (ಮುಂದೆ ಸ್ವಾಮಿ ಆತ್ಮಾನಂದ), ಯದುಪತಿ ಚಟ್ಟೋಪಾಧ್ಯಾಯ, ಶಶಿಭೂಷಣ ದಾಸ್, ಕುಂಜವಿಹಾರಿ ಬಸು ಹಾಗೂ ವಿಪಿನ ವಿಹಾರಿ ದೇ. ಸುಧೀರನನ್ನು ಹೊರತುಪಡಿಸಿ ಉಳಿದವರೆಲ್ಲರೂ ರಿಪ್ಪನ್ ಕಾಲೇಜಿನಲ್ಲಿ ಓದುತ್ತಿದ್ದರು. ಸುಶೀಲ ಎರಡು ತರಗತಿ ಕೆಳಗೆ, ಮಿಕ್ಕೆಲ್ಲರೂ ಒಂದೇ ಶ್ರೇಣಿಯವರು.

ಆ ಕಾಲದಲ್ಲಿ ಮಹಿಮ ಚಕ್ರವರ್ತಿಯ ಗುಂಪಿನ ಪ್ರಭಾವ ಕೊಲ್ಕತ್ತಾದಲ್ಲಿ ಬಹಳವಿತ್ತು. ಆತನ ಸಾಧನ ವೈಖರಿಯು ಅನೇಕ

ವೈಶಿಷ್ಟ್ಯಗಳಿಂದ ಕೂಡಿತ್ತು. ಶಂಖನಾದ, ಏಕತಾರಿಯೊಂದಿಗೆ ಓಂಕಾರಗಾನ ಮತ್ತು ಆಗಿನ ಕಾಲದಲ್ಲಿ ಬಳಕೆಯಲ್ಲಿದ್ದ ಅಲ್ಯುಮಿನಿಯಂ ನಂತಹ ಒಂದು ಲೋಹದ ಬಾಚಣಿಗೆಯಿಂದ ಉದ್ದವಾಗಿ ಬಿಟ್ಟಿರುವ ಒರಟು ಕೂದಲನ್ನು ಬಾಚುವಿಕೆ (ಉದ್ದೇಶ ಅಯಸ್ಕಾಂತೀಯ ಮತ್ತು ವಿದ್ಯುಚ್ಛಕ್ತಿಯ ಆಕರ್ಷಣೆ; ಅದು ಆಧ್ಯಾತ್ಮಿಕತೆಗೆ ಸಹಕಾರಿಯಂತೆ!). ಕೊಲ್ಕತ್ತೆಯ ಬೀದಿಗಿಳಿದರೆ, ಈ ರೀತಿಯ ವೇಷ-ಭೂಷಣಗಳುಳ್ಳ ಮಹಿಮನ ಗುಂಪಿನವರು ಒಂದಿಬ್ಬರಾದರೂ ಕಣ್ಣಿಗೆ ಬಿದ್ದೇ ಬೀಳುತ್ತಿದ್ದರು. ಈ ಚಕ್ರವರ್ತಿ ಮಹಾಶಯನದು ತುಂಬ ಗಾಂಭೀರ್ಯದ ವ್ಯಕ್ತಿತ್ವ. ಕಾಶೀಪುರದ ಆತನ ತೋಟದಲ್ಲಿ ಅವನ 'ಸಾಧನ ಚಕ್ರ'ವು ಸೇರುತ್ತಿತ್ತು. ಖಗೇನ್ ಅಲ್ಲಿಗೆ ಹೋಗಿಬರುತ್ತಿದ್ದು, ಅಲ್ಲಿಯ ಪದ್ಧತಿಯಂತೆ ಉದ್ದವಾದ ಕೂದಲನ್ನು ಬೆಳೆಸಿದ್ದನು. ಬೆಳಗ್ಗೆ, ಸಂಜೆ ಮನೆಯ ತನ್ನ ಚಿಕ್ಕ ಕೊಠಡಿಯಲ್ಲಿ ಸಾಂಬ್ರಾಣಿ ಹೊಗೆ ಹಾಕಿ, ಕಾಷಾಯವನ್ನುಟ್ಟು ಶಂಖವನ್ನೂದುತ್ತಿದ್ದ ಹಾಗೂ ಏಕತಾರಿ ವಾದ್ಯವನ್ನು ಹಿಡಿದು (ಕುಂಡಲಿನಿಯನ್ನು ಜಾಗೃತಗೊಳಿಸಲು) ಓಂಕಾರ ಸಾಧನೆ ಮಾಡುತ್ತಿದ್ದ. ಕಾಳೀಕೃಷ್ಣನೂ ಖಗೇನನನ್ನು ಅನುಸರಿಸಿ ಉದ್ದಕೂದಲು ಬಾಚಣಿಗೆ ಹಾಗೂ ಏಕತಾರಿಯನ್ನಿಟ್ಟುಕೊಂಡಿದ್ದ. ಖಗೇನನು ಇಷ್ಟೇ ಅಲ್ಲದೆ ನವೀನಚಂದ್ರ ರಾಯ್ ಎಂಬ ಉನ್ನತ ಮಟ್ಟದ ಕರ್ತಾಭಜಾ ಸಾಧಕನ ಹತ್ತಿರವೂ ಹೋಗಿಬರುತ್ತಿದ್ದ (ಈತ ಸಿಟಿ ಕಾಲೇಜಿನ ಅಧ್ಯಕ್ಷನಾದ, ಬ್ರಾಹ್ಮಸಮಾಜದ ಉಮೇಶ್ ಚಂದ್ರ ದತ್ತನ ಗುರು). ಇವರು ಕರ್ತಾಭಜಾ ಗುಂಪಿನವರಾದರೂ ಸ್ತ್ರೀಯರನ್ನಿಟ್ಟುಕೊಂಡು ಸಾಧನೆ ಮಾಡುತ್ತಿರಲಿಲ್ಲ. 'ಚಕ್ರ'ದಲ್ಲಿ ಕುಳಿತು ಧ್ಯಾನ ಮತ್ತು ಯೋಗಾಭ್ಯಾಸ ಮಾಡುತ್ತಿದ್ದರು.

ಸುಧೀರನು ಯೋಗಶಿಕ್ಷಣಕ್ಕಾಗಿ ಶ್ಯಾಮಾಚರಣ ಲಾಹಿರಿಯ ಶಿಷ್ಯನಾದ ಆರ್ಯ ಮಿಷನ್ ಇನ್‌ಸ್ಟಿಟ್ಯೂಟಿನ ಪಂಚಾನನ ಭಟ್ಟಾಚಾರ್ಯನ ಹತ್ತಿರ ಹೋಗಿಬರುತ್ತಿದ್ದ. ಸುಧೀರನು ವ್ಯಾಸಂಗ ಶೀಲ; ಧರ್ಮಗ್ರಂಥಗಳನ್ನು ಬಹಳವಾಗಿ ಓದುತ್ತಿದ್ದ. ಅವನು ಕಾಲಿಗೆ ಪಾದರಕ್ಷೆ ಧರಿಸುತ್ತಿರಲಿಲ್ಲ, ಪ್ಯಾಂಟನ್ನೂ ಧರಿಸುತ್ತಿರಲಿಲ್ಲ. ಉತ್ತರೀಯ ಹೊದ್ದುಕೊಂಡು ಕಾಲೇಜಿಗೆ ಹೋಗಿಬರುತ್ತಿದ್ದ. ಬ್ರಾಹ್ಮ ವಿದ್ಯಾಲಯದಲ್ಲಿ (ಸಿಟಿ ಕಾಲೇಜು) ಇದು ಸಭ್ಯತೆಯ ಲಕ್ಷಣವಲ್ಲವೆಂದು ಅಲ್ಲಿಯ ಅಧ್ಯಾಪಕರಾದ ಹೇರಂಬ ಮಿತ್ರರಿಂದ ಅವಹೇಳನಕ್ಕೂ ಗುರಿಯಾಗಿದ್ದ.

ಇನ್ನೂ ಎಷ್ಟೋ ಆಧ್ಯಾತ್ಮಿಕ ಬಂಧುಗಳು ಆ ನವ ಯುವಾವಸ್ಥೆಯ ಅಧ್ಯಾತ್ಮ-ಉನ್ಮಾದದ ನೆನಪಿನೊಂದಿಗೆ ಸೇರಿಹೋಗಿದ್ದಾರೆ. ಅವರ ಬಗ್ಗೆ ಕಾಳೀಕೃಷ್ಣನ ವಿವರಣೆ ಹೀಗಿದೆ:

''ನಾರಾಯಣ ಅಣ್ಣ ನೋಡಲು ಬಲು ಎತ್ತರ. ಆರೂವರೆ ಅಡಿಗೂ ಹೆಚ್ಚಿರಬಹುದು. ತೆಳು ಮೈಕಟ್ಟು, ತಲೆಯಲ್ಲಿ ಮಾರುದ್ದದ ಕೂದಲು, ಗಡ್ಡ ಮೀಸೆಗಳೂ ಇದ್ದವು. ವಯಸ್ಸು ೨೪-೨೫ ಇದ್ದಿರಬಹುದು. ತುಂಬ ಸರಳ ಮತ್ತು ಅಮಾಯಕ ಸ್ವಭಾವ. ಮದುವೆಯಾಗಿತ್ತು. ಗಡಪಾರಾದಲ್ಲಿದ್ದನು; ಗಂಡ-ಹೆಂಡತಿಯರಿಬ್ಬರೂ ಕಾಷಾಯ ತೊಟ್ಟು ಸಾಧನೆ, ಭಜನೆ ಮಾಡುತ್ತಿದ್ದರು. ಬಹಳ ಜೋರಾಗಿ ಸಂಕೀರ್ತನೆ ಮಾಡುತ್ತಿದ್ದರು. ನಾವು ಆಗಾಗ ಅವನಲ್ಲಿಗೆ ಹೋಗಿ ಆಧ್ಯಾತ್ಮಿಕ ವಿಷಯಗಳ ಬಗ್ಗೆ ಚರ್ಚಿಸಿ ಸಂಕೀರ್ತನೆಯಲ್ಲೂ ಪಾಲ್ಗೊಳ್ಳುತ್ತಿದ್ದೆವು, ಅವನೊಂದಿಗೆ ತುಂಬ ಬೆರೆಯುತ್ತಿದ್ದೆವು. ಅವನು ಕೋತಿಗಳ ಮಾಂಸವೊಂದನ್ನು ಬಿಟ್ಟು ಬಾಕಿ ಎಲ್ಲಾ ಜೀವಜಂತುಗಳ ಮಾಂಸವನ್ನು ತಾನು ತಿಂದಿರುವುದಾಗಿಯೂ, ಸರ್ಪವನ್ನೂ ಸಹ ಬಿಟ್ಟಿಲ್ಲವೆಂದು ಹೇಳಿಕೊಳ್ಳುತ್ತಿದ್ದ. ಅವನ ಚಿಕ್ಕ ಕೊಠಡಿ ಬಹಳ ಓರಣವಾಗಿರುತ್ತಿತ್ತು, ಹೂತೋಟವೂ ಇತ್ತು. ಮನೆಯಲ್ಲಿ ವ್ಯಾಘ್ರಚರ್ಮ ಮತ್ತು ಕಾಷಾಯ ಬಣ್ಣದ ಆಸನಗಳು, ಏಕತಾರಿ ವಾದ್ಯ, ತಂಬೂರಿ ಹಾಗೂ ದೇವದೇವಿಯರ ಚಿತ್ರಪಟಗಳಿರುತ್ತಿದ್ದವು.

''ಪಾಗಲ್ ದಾ (ಹುಚ್ಚು ಅಣ್ಣ) ವಿಜಯಕೃಷ್ಣ ಗೋಸ್ವಾಮಿಯವರ ಶಿಷ್ಯ. ಅವನು ಮಧುರಭಾವದ ಸಾಧನೆ ಮಾಡುತ್ತಿದ್ದ. ಭಗವತ್ಪ್ರೇಮಕ್ಕಾಗಿ ಹುಚ್ಚನಾಗಿ, ಆ ರೀತಿಯ ಭಾವನೆಗಳಿಂದ ಆವೇಶಗೊಳ್ಳುತ್ತಿದ್ದ ಕಾರಣ ಅವನನ್ನು ನಾವೆಲ್ಲರೂ 'ಹುಚ್ಚಣ್ಣ'ನೆಂದೇ ಕರೆಯುತ್ತಿದ್ದೆವು. ಖಗೇನನೊಂದಿಗೆ ನಾನು ತುಂಬ ಬೆರೆಯುತ್ತಿದ್ದೆನಾದ್ದರಿಂದ, ನಮ್ಮಿಬ್ಬರನ್ನು ಒಟ್ಟಿಗೆ ನೋಡಿದಾಗ ಪಾಗಲ್ ದಾ ರಾಧಾಕೃಷ್ಣರ ಯುಗಲಭಾವದಿಂದ ಉದ್ದೀಪ್ತನಾಗಿ ನಮ್ಮನ್ನೇ ನೆಟ್ಟ ದೃಷ್ಟಿಯಿಂದ ನೋಡುತ್ತಿರುತ್ತಿದ್ದ. ಸ್ವಲ್ಪ ದಿನಗಳಲ್ಲೇ ಆತ ಎಲ್ಲಿಗೋ ಹೊರಟುಹೋದ. ಬಹಳ ಹುಡುಕಿದರೂ ಆತನ ಸುಳಿವು ಸಿಗಲೇ ಇಲ್ಲ.

''ಖೇಲಾತ್ ಎಂಬುವನು ಶೈಶವದಲ್ಲೇ ತಂದೆ-ತಾಯಂದಿರನ್ನು ಕಳೆದುಕೊಂಡಿದ್ದರಿಂದ ಸರ್ಪಂಟೇನ್ ಲೇನಿನಲ್ಲಿರುವ ಆತನ ಸೋದರಮಾವನೇ ಅವನನ್ನು ಬೆಳೆಸಿದ್ದ. ಉಜ್ವಲ ಗೌರ ವರ್ಣ, ಸುಲಕ್ಷಣವಂತ, ಬಲಿಷ್ಠ ಮತ್ತು ಮೃದು ಸ್ವಭಾವದ ಯುವಕ. ಮೊದಲು ದುಷ್ಟರ ಸಂಗಕ್ಕೆ ಬಿದ್ದು ಸ್ವಲ್ಪಮಟ್ಟಿಗೆ ನೈತಿಕವಾಗಿ ಪತಿತನಾಗಿದ್ದ. ಆದ್ದರಿಂದ ನಮ್ಮ ಮುಂದೆ ಕುಗ್ಗಿ ಹೋಗುತ್ತಿದ್ದ. ಖಗೇನನ ಪ್ರಭಾವದಿಂದ ಖೇಲಾತ್ ನವಜೀವನ ಪಡೆದಿದ್ದ. ಅವನ ಮಧುರ ಸ್ವಭಾವದಿಂದಾಗಿ ನಾವೆಲ್ಲರೂ ಅವನನ್ನು ಬಹಳ ಪ್ರೀತಿಸುತ್ತಿದ್ದೆವು. ಮುಂದೆ ಅವನು ಜಯರಾಮಬಾಟಿಯಲ್ಲಿ ಶ್ರೀಮಾತೆ ಶಾರದಾದೇವಿಯವರ ದರ್ಶನ ಪಡೆದಾಗ 'ಮಾತೃವಾತ್ಸಲ್ಯವೆಂದು ಯಾವುದನ್ನು ಕರೆಯುತ್ತಾರೋ ಅದೇನೆಂದು ನಾನರಿಯೆ' ಎಂದು ಅವರಿಗೆ ಹೇಳಿದ್ದ. ಬಾಲ್ಯದಲ್ಲಿಯೇ ಆತನ ತಾಯಿ ತೀರಿಹೋಗಿದ್ದಳೆಂದು ಕೇಳಿ ಶ್ರೀಮಾತೆಯವರು ತುಂಬ ದುಃಖಿಸಿ, ಕರುಣೆಯಿಂದ ಆಗಲೇ ಅವನಿಗೆ ಮಂತ್ರದೀಕ್ಷೆಯನ್ನೂ ದಯಪಾಲಿಸಿದ್ದರು. ಈ ಖೇಲಾತನೇ ನಮ್ಮ ಸಂಗಡಿಗರ ಪೈಕಿ ಶ್ರೀಮಾತೆಯವರ ಕೃಪೆ ಪಡೆದವರಲ್ಲಿ ಮೊದಲಿಗ. ಆದರೆ ಅವನು ಅದನ್ನು ನಮ್ಮ ನಡುವೆ ಗೋಪ್ಯವಾಗಿರಿಸಿದ್ದ. ಚಿಕ್ಕ ವಯಸ್ಸಿನಲ್ಲಿಯೇ ಅವನು ಕಾಲರಾದಿಂದ ಮೃತ್ಯುವಶನಾದ.''

*(ಮುಂದುವರಿಯುವುದು)*

# ಶ್ರೀಮಾತೆಯವರ ಪತ್ರಗಳು

ಅನುವಾದ: **ಪ್ರವ್ರಾಜಿಕಾ ಧರ್ಮಪ್ರಾಣಾ**

ಶ್ರೀಮಾತೆ ಶಾರದಾದೇವಿಯವರು ತಮ್ಮ ಶಿಷ್ಯಂದಿರ ಅಥವಾ ಸೇವಕರ ಮೂಲಕ ಪತ್ರವನ್ನು ಓದಿಸುತ್ತ, ಬರೆಸುತ್ತ ವ್ಯವಹರಿಸುತ್ತಿದ್ದರು. ಈ ಪತ್ರಗಳ ಉದ್ದಕ್ಕೂ ಶ್ರೀಮಾತೆಯವರ ದಿವ್ಯಪ್ರೇಮ ಹರಿದಾಡುತ್ತಿದೆ. ಬಂಗಾಳಿಯಲ್ಲಿ ಈ ಪತ್ರಗಳನ್ನು ಸಂಗ್ರಹಿಸಿ **'ಮಾಯೇರ್ ಚಿಟ್ಟ'** ಎಂದು ಪ್ರಕಟಿಸಲಾಗಿದೆ. (ರಾಮಕೃಷ್ಣ ಮಿಷನ್ ಇನ್‌ಸ್ಟಿಟ್ಯೂಟ್ ಆಫ್ ಕಲ್ಚರ್ ಪ್ರಕಟಣೆ). ಅದರಿಂದ ಆಯ್ದ ಕೆಲವು ಪತ್ರಗಳನ್ನಿಲ್ಲಿ ಅನುವಾದಿಸಿ ಕೊಡಲಾಗಿದೆ. ಅನುವಾದಕಿ ಚಿಕ್ಕಮಗಳೂರು ಶ್ರೀಶಾರದಾ ಮಠದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.

೧೮೮೬ರಲ್ಲಿ ಶ್ರೀರಾಮಕೃಷ್ಣರು ಮಹಾಸಮಾಧಿಯನ್ನು ಹೊಂದಿದರು. ತಮ್ಮ ನಂತರ ತಮ್ಮ ಅವತಾರದ ಉದ್ದೇಶವನ್ನು ನೆರವೇರಿಸಲು ತಮ್ಮ ಪತ್ನಿಗೆ ಅವರು ಎಲ್ಲಾ ರೀತಿಯ ತರಬೇತಿಯನ್ನು ನೀಡಿದ್ದರು. ಅಂತೆಯೇ ಅವರ ಮಹಾಸಮಾಧಿಯ ಬಳಿಕ ಶ್ರೀಶಾರದಾದೇವಿಯವರು ತಮ್ಮನ್ನು ತಾವು ಎಷ್ಟು ಗೋಪ್ಯವಾಗಿಟ್ಟುಕೊಳ್ಳಲು ಶ್ರಮಿಸಿದರೂ, ಶ್ರೀರಾಮಕೃಷ್ಣರ ಸಂನ್ಯಾಸಿ ಶಿಷ್ಯರೂ, ಗೃಹಸ್ಥ ಶಿಷ್ಯರೂ ಅವರನ್ನು ಅದಾಗಲೇ ಸ್ಥಾಪಿತವಾಗಿದ್ದ ಶ್ರೀರಾಮಕೃಷ್ಣ ಸಂಘದ ಸಂಘಜನನಿಯನ್ನಾಗಿ ಮಾಡಿಕೊಂಡು, ಆಧ್ಯಾತ್ಮಿಕ ಗುರುವಾಗಿಯೂ, ಮಾತೆಯಾಗಿಯೂ ಪೂಜಿಸತೊಡಗಿದ್ದರು. ಅವರಿಂದ ಸ್ವಂತ ತಾಯಿಗಿಂತಲೂ ಹೆಚ್ಚಿನ ಸ್ನೇಹವನ್ನು ಪಡೆಯತೊಡಗಿದ್ದರು. ಶ್ರೀಶಾರದಾದೇವಿಯವರು ಜಯರಾಮಬಾಟಿಯಲ್ಲಿ ಇರುವಾಗಲೂ, ಕೊಲ್ಕತ್ತದಲ್ಲಿರುವಾಗಲೂ ಅವರ ಬಳಿ ಹೋಗಿ, ಅಥವಾ ಪತ್ರದ ಮೂಲಕ ತಮ್ಮ ತಮ್ಮ ಕಷ್ಟಸುಖಗಳನ್ನು ಹೇಳಿಕೊಂಡು ಆಧ್ಯಾತ್ಮಿಕ ಶಾಂತಿಯನ್ನು ಪಡೆಯುತ್ತಿದ್ದರು. ಜಗನ್ಮಾತೆ ಶ್ರೀಶಾರದಾದೇವಿಯವರಂತೂ ಅವರ ಆಧ್ಯಾತ್ಮಿಕ ಜೀವನ ಹಾಗೂ ಐಹಿಕಜೀವನದ ಸಂಪೂರ್ಣ ಜವಾಬ್ದಾರಿಯನ್ನು ತೆಗೆದುಕೊಂಡು, ಅವರಿಗೆ ಬೆಂಬಲವಾಗಿದ್ದರು. ಭಕ್ತರ ಜೊತೆ ನಡೆದ ಸಂಭಾಷಣೆ ಮತ್ತು ಅವರ ಪತ್ರಗಳಿಗೆ ನೀಡಿದ ಉತ್ತರಗಳಲ್ಲಿ ಇದನ್ನು ನೋಡಬಹುದು.

(೧)

*ಬಲರಾಮ ಬಸು ಶ್ರೀರಾಮಕೃಷ್ಣರ ಅತ್ಯಂತ ನಿಕಟ ಭಕ್ತರಾಗಿದ್ದರು. ಶ್ರೀ ರಾಮಕೃಷ್ಣರ ಮಹಾಸಮಾಧಿಯ ನಂತರ ಅವರ ಸಂನ್ಯಾಸಿ ಶಿಷ್ಯರಂತೂ ಅವರಿಗೆ ಇನ್ನೂ ಹತ್ತಿರದವರಾಗಿದ್ದರು. ಶ್ರೀಮಾತೆಯವರು ಆಗಾಗ ಅವರ ಮನೆಯಲ್ಲಿ ತಂಗಿ, ಶ್ರೀರಾಮಕೃಷ್ಣರ ಅತಿ ಪ್ರೀತಿಯ ಈ ಭಕ್ತನನ್ನು ಅತ್ಯಂತ ಆದರದಿಂದ ನೋಡಿಕೊಳ್ಳುತ್ತಿದ್ದರು. ಜಯರಾಂಬಾಟಿಯಲ್ಲಿದ್ದಾಗ ಪತ್ರದ ಮೂಲಕ ಅವರ ಕ್ಷೇಮಸಮಾಚಾರವನ್ನು ಕೇಳಿ ತಿಳಿದುಕೊಳ್ಳುತ್ತಿದ್ದರು. ಆ ಪತ್ರದಲ್ಲಿ ಉಳಿದ ಸಂನ್ಯಾಸೀ ಶಿಷ್ಯರ ಬಗ್ಗೆ, ಹಾಗೂ ಗೃಹಸ್ಥಶಿಷ್ಯರ ಬಗ್ಗೆ ವಿಚಾರಿಸಿಕೊಳ್ಳುತ್ತಿದ್ದರು. ಈ ಕೆಳಗಿನ ಪತ್ರದಲ್ಲಿ ಶ್ರೀಮಾತೆಯವರು ಅವರಿಗಾಗಿ ಎಷ್ಟೊಂದು ಚಿಂತಿಸುತ್ತಿದ್ದರೆಂಬುದು ತಿಳಿಯುವುದು:*



ಶ್ರೀ ಶ್ರೀ ಗುರುದೇವ

ಜಯರಾಂಬಾಟಿ, ಗುರುವಾರ
೨೩-೧೧-೧೮೮೮

ಆಶೀರ್ವಾದ ಪತ್ರ

ರಾಖಾಲನಿಗೆ ಜ್ವರ ಬಂದಿತ್ತು. ಅವನು ಈಗ ಹುಷಾರಾಗಿದ್ದಾನೆ ತಾನೆ? ನೀವು ಹೇಗಿದ್ದೀರಿ? ನಿಮಗೆ ಜ್ವರ ಬಂದಿದೆ ಎಂದು ಕೇಳಿ ತುಂಬಾ ಚಿಂತೆಯಾಯಿತು. ಹೇಗಿದ್ದೀರಿ ಎಂದು ಯಾವಾಗಲೂ ಪತ್ರ ಬರೆದು ತಿಳಿಸಿ. ನಿಮಗೆ ನನ್ನ ಆಶೀರ್ವಾದವಿದೆ. ಮಾಸ್ಟರ್ ಮಹಾಶಯರ ಮನೆಯ ಸುದ್ದಿ ಏನು? ಅವರು ಏಕೆ ಪತ್ರ ಬರೆಯುತ್ತಿಲ್ಲ? ರಾಖಾಲ್ ಪಶ್ಚಿಮಕ್ಕೆ ಹೋಗುತ್ತಾನೆಂದು ಕೇಳಿದೆ. ಕಳೆದ ಬಾರಿ (ಪುರಿ) ಜಗನ್ನಾಥಕ್ಕೆ ಚಳಿಗಾಲದಲ್ಲಿ ಹೋಗಿ ತುಂಬಾ

ಕಷ್ಟಪಟ್ಟಿದ್ದ. ಚಳಿಗಾಲದ ನಂತರ ಫಾಲ್ಗುಣ ಕಳೆದ ಮೇಲೆ ಹೋದರೆ ವಾಸಿ. ಆದರೆ ಅವನಿಗೆ ಈಗಲೇ ಹೋಗಬೇಕೆಂಬ ಇಚ್ಛೆ ಇದ್ದರೆ ಹೋಗಲಿ, ಇನ್ನೇನು ಹೇಳಲಿ? ಇಲ್ಲಿ ಒಂಭತ್ತು ದಿನಗ ಳಿಂದ ಮಳೆ ಸುರಿಯುತ್ತಿದೆ. ಆದ್ದರಿಂದ ಯೋಗಿನ್ ಮಾ, ಗೋಲಾಪ್ ಮಾ ಮೊದಲಾದವರಿಗೆ ಇಲ್ಲಿಂದ ಹೊರಡಲು ಸಾಧ್ಯ ವಾಗುತ್ತಿಲ್ಲ. ಶಾರದಾ (ಶಾರದಾಪ್ರಸನ್ನ, ಸ್ವಾಮಿ ತ್ರಿಗುಣಾತೀತಾ ನಂದರು) ವರಾಹನಗರಕ್ಕೆ ಹೋಗಲಿದ್ದಾನೆ. ಇಲ್ಲಿ ಎಲ್ಲರೂ ಕ್ಷೇಮ ವಾಗಿದ್ದಾರೆ. ನಾನೂ ಚೆನ್ನಾಗಿದ್ದೇನೆ. ನಿನಗೆ ನನ್ನ ಆಶೀರ್ವಾದ. ಹುಡುಗ ಯೋಗಿನ್ (ಸ್ವಾಮಿ ಯೋಗಾನಂದರು) ಚಿತ್ರಕೂಟ ದಿಂದ ಪತ್ರ ಬರೆದಿದ್ದ. ಅವನು ಚೆನ್ನಾಗಿದ್ದಾನೆ.

ಇತಿ, ನಿನ್ನ ತಾಯಿ

(೨)

*'ಶ್ರೀರಾಮಕೃಷ್ಣ ವಚನವೇದ'ವನ್ನು ಬರೆದ ಮಹೇಂದ್ರನಾಥ ಗುಪ್ತ ('ಮ') ರವರ ಪತ್ನಿ ನಿಕುಂಜಾದೇವಿ ಸಾಂಸಾರಿಕ ದುಃಖ ದಿಂದ ಮಾನಸಿಕವಾಗಿ ನರಳುತ್ತಿದ್ದಾಗ ಶ್ರೀಮಾತೆ ಸಾಂತ್ವನ ನೀಡಿ ಬರೆದ ಪತ್ರವಿದು:*

ಶ್ರೀಶ್ರೀಗುರುದೇವ ಕೃಪೆ

ಆಷಾಢ ೨

ಅಂಚೆ ದಿನಾಂಕ : ೧೭-೭-೯೪

ದೀರ್ಘಾಯುಷ್ಯದ ಶುಭಹಾರೈಕೆಗಳು.

ನಿನ್ನ ಪತ್ರ ತಲುಪಿ, ಎಲ್ಲ ಸಮಾಚಾರ ತಿಳಿದುಕೊಂಡೆನು. 'ಶ್ರೀಮಾತೆ ನನ್ನನ್ನು ಮರೆತಿದ್ದಾರೆ' ಎಂದು ಬರೆದಿರುವೆ. ಆದರೆ ನಾನು ಮರೆತಿಲ್ಲ. ಇಲ್ಲಿ ತುಂಬಾ ಜನರು ಬಂದು ಹೋಗುತ್ತಿರು ವುದರಿಂದ ಅವರ ಮೂಲಕ ನಿಮ್ಮ ಸಮಾಚಾರವೆಲ್ಲ ತಿಳಿಯುತ್ತಿದೆ. ಆದ್ದರಿಂದ ಪ್ರತ್ಯೇಕವಾಗಿ ನಿಮಗೆ ಬರೆಯುತ್ತಿಲ್ಲ. ಅದಕ್ಕಾಗಿ ದುಃಖಿಸಬೇಡ. ನಾನು ನಿನ್ನನ್ನು ಹೃದಯಪೂರ್ವಕವಾಗಿ ತುಂಬಾ ಪ್ರೀತಿಸುತ್ತಿದ್ದೇನೆ. ನೀನು ಬರೆದಿರುವೆ, ಆತ್ಮಹತ್ಯೆ ಮಾಡಿಕೊಳ್ಳುವೆ ಎಂದು. ಇದನ್ನು ಬಾಯಲ್ಲಿ ಎಂದಿಗೂ ಬರಗೊಡಬೇಡ. ಅದ ನ್ನಾಡುವುದು ಮಹಾಪಾಪವಾಗುವುದು. ನೀನೇನು ಮಾಡುವೆ? ಸ್ವಲ್ಪ ಹೇಗಾದರೂ ಸಹಿಸಿಕೋ. ನಮ್ಮ ಊರಿಗೆ ಬಂದು ಇಲ್ಲಿ ನದೀತೀರದಲ್ಲಿ ನಡೆದಾಡು. ನಿನ್ನನ್ನು ಯಾವಾಗಲೂ ಜ್ಞಾಪಿಸಿ ಕೊಳ್ಳುತ್ತಿರುತ್ತೇನೆ ಹಾಗೂ ನಿನ್ನನ್ನು ಅತ್ಯಂತ ಪ್ರೀತಿಸುತ್ತೇನೆ. ಮಾಸ್ಟರ್ ಮಹಾಶಯ ಕಳುಹಿಸಿರುವ ಎರಡು ಸೀರೆಗಳನ್ನು ಉಡುತ್ತಿದ್ದೇನೆ. ಇದನ್ನು ಮಾಸ್ಟರ್ ಮಹಾಶಯನಿಗೆ ತಿಳಿಸು. ಅವನಿಗೆ ನನ್ನ ಆಶೀರ್ವಾದವನ್ನು ತಿಳಿಸು. ನಿನಗೂ ನನ್ನ ಆಶೀ ರ್ವಾದಗಳು. ನಿನ್ನ ಮಕ್ಕಳಿಗೂ, ಹೆತ್ತ ತಾಯಿಗೂ ನನ್ನ ಆಶೀ ರ್ವಾದಗಳನ್ನು ತಿಳಿಸು. ಭಗವಂತನಲ್ಲಿ ಶರಣಾಗತಳಾಗು. ಆಗಾಗ ಪತ್ರ ಬರೆಯುತ್ತಿರು. ನಿಜವಾಗಿಯೂ ನಾನು ನಿನ್ನನ್ನು ಪ್ರೀತಿಸುತ್ತಿದ್ದೇನೆ. ಯಾವಾಗಲೂ ಜ್ಞಾಪಿಸಿಕೊಳ್ಳುತ್ತಿದ್ದೇನೆ. ಇಲ್ಲಿ ಎಲ್ಲರೂ ಕುಶಲ. ನಿಮ್ಮ ಕುಶಲದ ಬಗ್ಗೆ ತಿಳಿಸುತ್ತಿರು.

ಇತಿ, ನಿನ್ನ ತಾಯಿ

## ಶ್ರೀಮಾತೆಯವರ ಲೀಲಾಮಾಧುರ್ಯ

ಒಂದು ಸಲ ಜಯರಾಮಬಾಟಿಯಲ್ಲಿ ಶ್ರೀಮಾತೆಯವರ ಜನ್ಮದಿನದಂದು ಭಕ್ತರಿಗೆಲ್ಲ ಆಸೆಯಾಯಿತು, ಶ್ರೀಮಾತೆ ಮೊದಲು ಊಟ ಮಾಡಲಿ, ಅನಂತರ ಶಿಷ್ಯಂದಿರು ಅವರ ಪ್ರಸಾದ ಸ್ವೀಕರಿಸುವರು ಎಂಬುದಾಗಿ. ಅವರಲ್ಲಿ ಒಬ್ಬನದು ಅತಿಯಾದ ಉತ್ಸಾಹ. ಅವನೇ ಮುಂದಡಿಯಿಟ್ಟು ಶ್ರೀಮಾತೆಯವರಿಗೆ ಈ ವಿಷಯವನ್ನು ತಿಳಿಸಿದ. ಶ್ರೀಮಾತೆ ಅದಕ್ಕೆ ಏನನ್ನೂ ಪ್ರತಿಯಾಗಿ ಹೇಳಲಿಲ್ಲ, ಮೌನವಾಗಿ ಸಮ್ಮತಿಸಿದರು. ಶ್ರೀರಾಮಕೃಷ್ಣರ ನೈವೇದ್ಯವಾದ ಬಳಿಕ ಎಲ್ಲ ಖಾದ್ಯ ಪ್ರಸಾದಗಳನ್ನು ಒಂದು ತಟ್ಟೆಯಲ್ಲಿ ಜೋಡಿಸಿ, ಒಂದು ಆಸನದ ಮುಂದೆ ಅದನ್ನಿಟ್ಟು, ಶ್ರೀಮಾತೆಯನ್ನು ಊಟಕ್ಕೆ ಕರೆದರು. ಅವರು ನಿಧಾನವಾಗಿ ಯಂತ್ರ ಚಲಿಸುವಂತೆ ಬಂದು ಆಸನದಲ್ಲಿ ಕುಳಿತರು. ಕರುಣಾಪೂರ್ಣವಾದ ದೃಷ್ಟಿಯಿಂದ ಅವರು ತಟ್ಟೆಯಲ್ಲಿದ್ದ ಎಲ್ಲ ಪದಾರ್ಥಗಳನ್ನು ನೋಡಿದರು, ಎಲ್ಲವನ್ನೂ ಒಂದಿಷ್ಟು ಬಾಯಿಗೆ ಹಾಕಿಕೊಂಡರು. ಅನಂತರ ತಮ್ಮ ಮುಂದಿದ್ದ ಶಿಷ್ಯನ ಮುಖದತ್ತ ನೋಡಿ ಅತ್ಯಂತ ಕಾತರರಾಗಿ, ''ನನ್ನ ಮಕ್ಕಳು ಊಟ ಮಾಡುವ ಮೊದಲು ನನ್ನ ಗಂಟಲಲ್ಲಿ ಆಹಾರ ಇಳಿಯುತ್ತಿಲ್ಲ. ಬೇಗನೆ ನೀವೆಲ್ಲ ಊಟ ಮಾಡುವುದಕ್ಕೆ ವ್ಯವಸ್ಥೆ ಮಾಡು'' ಎಂದರು. ಹಾಗೆ ಹೇಳಿದವರೇ ಕೈಬಾಯಿ ತೊಳೆದು ಎದ್ದುಬಿಟ್ಟರು. ತಮ್ಮ ಕೋಣೆಗೆ ಹೋಗಿ, ತಮ್ಮ ಮಕ್ಕಳು (ಶಿಷ್ಯಂದಿರು) ಊಟ ಮಾಡುವುದನ್ನು ನೋಡಲು ಬಾಗಿಲ ಬಳಿ ಕುಳಿತರು. ಎಲ್ಲ ವ್ಯವಸ್ಥೆಯನ್ನೂ ಚೆನ್ನಾಗಿ ಮಾಡಲಾಗಿತ್ತು ; ಕೆಲವೇ ಕ್ಷಣಗಳಲ್ಲಿ ಶಿಷ್ಯಂದಿ ರೆಲ್ಲ ಊಟಕ್ಕೆ ಕುಳಿತರು. ಆಗ ಶ್ರೀಮಾತೆಯವರ ಜೀವಕ್ಕೆ ತಂಪೆರೆದಂತಾಯಿತು. ಯಾವ ಮೂರ್ಖ ಶಿಷ್ಯ ತಾನೇ ಮುಂದಾಗಿ ಶ್ರೀಮಾತೆಯವರನ್ನು ಮೊದಲು ಊಟ ಮಾಡುವಂತೆ ಒತ್ತಾಯಿಸಿ ಅವರನ್ನು ಒಪ್ಪಿಸಿದ್ದನೋ, ಹಾಗೂ ಅದರಿಂದ ಸಂತಸಗೊಂಡಿ ದ್ದನೋ, ಅವನಿಗೆ ಈಗ ಬೋಧೆಯುಂಟಾಯಿತು, 'ತಾನೆಂಥ ಕೆಲಸ ಮಾಡಿಬಿಟ್ಟೆ! ಈ ದಿನ ಶ್ರೀಮಾತೆಯವರಿಗೆ ಊಟವಿಲ್ಲದಂತೆ ಮಾಡಿಬಿಟ್ಟೆನಲ್ಲ ! ಎಂದಿನಂತೆ ಶಿಷ್ಯಂದಿರ ಊಟಕ್ಕೆ ಮೊದಲೇ ವ್ಯವಸ್ಥೆ ಮಾಡಿ, ಅನಂತರ ಶ್ರೀಮಾತೆಯವರನ್ನು ಉಳಿದ ಹೆಣ್ಣು ಮಕ್ಕಳೊಂದಿಗೆ ಊಟಕ್ಕೆ ಕುಳ್ಳಿರಿಸಿದ್ದರೆ ಚನ್ನಾಗಿರುತ್ತಿತ್ತು , ಅವರು ಶಾಂತವಾಗಿ ಊಟ ಮಾಡಿಬಿಡುತ್ತಿದ್ದರು. ಹಾ! ನಾವೆಲ್ಲ ವೈಭವಕ್ಕೆ ದಾಸರು. ಅವರ ಈ ಮಾಧುರ್ಯಮಯವಾದ ಲೀಲೆಯನ್ನು ನಾವು ಹೇಗೆ ತಾನೇ ತಿಳಿದೇವು?'

*– ಸ್ವಾಮಿ ಶಾರದೇಶಾನಂದ, 'ಶ್ರೀ ಶ್ರೀ ಮಾಯೇರ್ ಪದಪ್ರಾಂತೇ' ಗ್ರಂಥದಿಂದ*



# ಶ್ರೀರಾಮಕೃಷ್ಣರು ಮತ್ತು ಏಸುಕ್ರಿಸ್ತನ ನಡುವಿನ ಸಾದೃಶ್ಯಗಳು



ಸ್ವಾಮಿ ಪರಹಿತಾನಂದ

ಅವತಾರ ಪುರುಷರ ಜೀವನದ ಘಟನೆಗಳಲ್ಲಿ ಸಾದೃಶ್ಯ ಕಂಡುಬರುವುದು ಸಹಜ. ಅವರ ಜೀವನದ ಉದ್ದೇಶ, ಧ್ಯೇಯ, ಹಾಗೂ ಆಯಾ ಯುಗಕ್ಕನುಗುಣವಾದ ನಡವಳಿಕೆಗಳಲ್ಲಿ ಸಮಾನ ಅಂಶಗಳನ್ನು ಗುರುತಿಸಬಹುದಾಗಿದೆ. ಕ್ರಿಸ್‌ಮಸ್ ಹಬ್ಬದ ಸಂದರ್ಭಕ್ಕೆ ಸೂಕ್ತವೆನಿಸುವಂತೆ ಈ ಲೇಖನವನ್ನು ಬರೆದ ಲೇಖಕರು ಪೊನ್ನಂಪೇಟೆ ಶ್ರೀರಾಮಕೃಷ್ಣ ಶಾರದಾಶ್ರಮದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.

**ಯು**ಗಧರ್ಮಕ್ಕೆ ಅನುಗುಣವಾಗಿ ಭಗವಂತ ಬಗೆಬಗೆಯ ಅವತಾರಗಳನ್ನು ಧರಿಸಿ ಅವತೀರ್ಣನಾಗುತ್ತಾನೆ. ಈ ಅನಂತ ಅವತಾರಗಳಲ್ಲಿ ನಾವು ಭಗವಂತನ ವಿಶೇಷ ಆವಿರ್ಭಾವವನ್ನು ಕಾಣುತ್ತೇವೆ. ಒಂದೊಂದು ಅವತಾರದಲ್ಲಿ ಒಂದೊಂದು ವಿಶೇಷತೆ, ವೈವಿಧ್ಯತೆ ಮತ್ತು ಸಾಮ್ಯತೆಗಳಿರುವುದು ಗಮನೀಯ ಅಂಶ. ಒಮ್ಮೆ ನರೇಂದ್ರನಾಥ 'ಈ ಬ್ರಹ್ಮಾಂಡ ಅನಂತವಾದದ್ದು, ಅವತಾರಗಳೂ ಅನಂತವೇ' *(**ಶ್ರೀರಾಮಕೃಷ್ಣ ವಚನವೇದ**, ಸಂ. ೨, ಪು.೩೨೪)* ಎಂದು ಶ್ರೀರಾಮಕೃಷ್ಣರಿಗೆ ಹೇಳಿರುವುದನ್ನು ಇಲ್ಲಿ ಸ್ಮರಿಸಬಹುದು. ಮುಂದೆ ಸ್ವಾಮಿ ವಿವೇಕಾನಂದರಾಗಿ ಅವರು ತಮ್ಮ ಗುರುವರೇಣ್ಯರನ್ನು '**ಅವತಾರ ವರಿಷ್ಠಾಯ ರಾಮಕೃಷ್ಣಾಯ ತೇ ನಮಃ**' ಎಂದು ಸ್ತುತಿಸುತ್ತಾರೆ. ಅಂದರೆ ಶ್ರೀರಾಮಕೃಷ್ಣರು ಕೇವಲ ಅವತಾರಪುರುಷರು ಮಾತ್ರವಲ್ಲ, ಬದಲಾಗಿ ಅವತಾರಗಳಿಗೇ ಮೂಲಪುರುಷರು ಅಥವಾ ಅವತಾರಗಳಲ್ಲಿ ಅಗ್ರಗಣ್ಯರು ಎಂದು ತಿಳಿಯಬೇಕು.

ಈ ಅನಂತ ಅವತಾರಗಳಲ್ಲಿ ಭಗವಂತ, ಏಸುಕ್ರಿಸ್ತನ ರೂಪ ತಾಳಿ ತನ್ನ ನಿತ್ಯಧಾಮದಿಂದ ಈ ಧರೆಗೆ ಅವತೀರ್ಣನಾಗಿ ನರಲೀಲೆಯನ್ನು ತೋರಿದ್ದಾನೆ. ಹೀಗೆಯೇ ಕಾಲಾಂತರದಲ್ಲಿ ಪುನಃ ಭಗವಂತನು ಶ್ರೀರಾಮಕೃಷ್ಣರಾಗಿಯೂ ಅವತರಿಸಿದ್ದಾನೆ ಎನ್ನುವುದು ಅವರ ಭಕ್ತರ ವಿಶ್ವಾಸ. ಶ್ರೀರಾಮಕೃಷ್ಣರ ಜೀವಿತಾವಧಿಯಲ್ಲಿಯೇ ಅನೇಕರು ಅವರನ್ನು ಭಗವಂತನ ಅವತಾರವೆಂದು ಗುರುತಿಸಿರುವುದನ್ನು ನಾವು ಕಾಣಬಹುದು. ಈ ವಿಷಯದ ಬಗ್ಗೆ ಚರ್ಚಿಸಲು ಸ್ವಯಂ ಶ್ರೀರಾಮಕೃಷ್ಣರೇ ಭಕ್ತರನ್ನು ಪ್ರೇರೇಪಿಸುತ್ತಿದ್ದರು. ಅಂತಹ ಚರ್ಚೆಗಳನ್ನು '**ಶ್ರೀರಾಮಕೃಷ್ಣ ವಚನವೇದ**'ದಲ್ಲಿ ನಾವು ನೋಡಬಹುದು. ಒಮ್ಮೆ 'ಮಿಶ್ರ' ಎಂಬ ಹೆಸರಿನ ಒಬ್ಬ ಕ್ರಿಶ್ಚಿಯನ್ ಭಕ್ತ ಶ್ರೀರಾಮಕೃಷ್ಣರೊಡನೆ ಮಾತನಾಡುತ್ತಾ ನೆರೆದಿದ್ದ ಭಕ್ತರಿಗೆ ಹೇಳುತ್ತಾನೆ: ''ಏಸು ಮೇರಿಯ ಪುತ್ರನಲ್ಲ, ಸ್ವಯಂ ಭಗವಂತನೇ. ಇವರು (ಪರಮಹಂಸರು) ಈಗ ನಿಮಗೆ ಈ ರೀತಿಯಾಗಿ ಕಾಣಿಸಿಕೊಳ್ಳುತ್ತಿದ್ದಾರೆ. ಆದರೆ ಇವರು ಸಾಕ್ಷಾತ್ ಭಗವಂತನೇ...'' *(**ವಚನವೇದ**, ಸಂ.೨, ಪು.೫೪೯)*

ನಮಗೆ ಅಚ್ಚರಿ ಮೂಡಿಸುವ ವಿಷಯವೆಂದರೆ ಈ ಸತ್ಯವನ್ನು ಸ್ವಯಂ ಶ್ರೀರಾಮಕೃಷ್ಣರೇ ಒಪ್ಪಿಕೊಂಡಿರುವುದು. ಬಾಲಕ ಸ್ವಭಾವದ ಅವರು ಕೆಲವೊಮ್ಮೆ ತಮ್ಮ ಭಕ್ತರನ್ನು ''ನನ್ನ ಬಗ್ಗೆ ನಿನ್ನ ಅಭಿಪ್ರಾಯವೇನು?'' ಎಂದು ಕೇಳುತ್ತಿದ್ದರು. ಕ್ರೈಸ್ತ ಭಕ್ತನಾದ ವಿಲಿಯಂಸ್, ''ನೀವು ನಿತ್ಯಚಿನ್ಮಯವಿಗ್ರಹನಾದ ಭಗವತ್ಪುತ್ರನಾದ ಏಸುಕ್ರಿಸ್ತ'' ಎಂದು ಉತ್ತರಿಸುತ್ತಾನೆ. ಮತ್ತೊಂದು ಸಂದರ್ಭದಲ್ಲಿ ಅವರು ಮಾಸ್ಟರ್ ಮಹಾಶಯನನ್ನು ಹೀಗೆಯೇ ಪ್ರಶ್ನಿಸುತ್ತಾರೆ. ಅದಕ್ಕೆ ಮಾಸ್ಟರ್, ''ನನಗನಿಸುತ್ತದೆ ನೀವು, ಏಸು, ಚೈತನ್ಯದೇವ – ಮೂವರೂ ಒಂದೇ; ಒಬ್ಬನೇ ಈ ಮೂರು ರೂಪವನ್ನು ತಾಳಿದ್ದಾನೆ ಅಂತ'' ಎಂದು ಉತ್ತರಿಸುತ್ತಾನೆ. ಶ್ರೀರಾಮಕೃಷ್ಣರು ಅತ್ಯಂತ ಸಂತುಷ್ಟರಾಗಿ ತಮ್ಮ ಅನುಮೋದನೆಯನ್ನು ಸೂಚಿಸುತ್ತಾ, ''ಹೌದು, ಹೌದು! ಒಬ್ಬನೆ! ಒಬ್ಬನೆ! ನಿಜವಾಗಿಯೂ ಒಬ್ಬನೇ! ಭಗವಂತನೇ ಇಲ್ಲಿ (ತಮ್ಮ ಶರೀರದಲ್ಲಿ) ಈ ರೀತಿಯಾಗಿ ವಾಸಿಸುತ್ತಿದ್ದಾನೆ ಎಂಬುದು ನಿನ್ನ ಕಣ್ಣಿಗೆ ಕಾಣಿಸುತ್ತಿಲ್ಲವೇನು?'' ಎಂದರು. *(**ವಚನವೇದ**, ಸಂ. ೨, ಪು. ೪೦೫)*

ನಮ್ಮ ಕಣ್ಣಿಗೆ, ಮನಸ್ಸಿಗೆ ಮತ್ತು ಹೃದಯಕ್ಕೆ ಈ ಸತ್ಯ ವೇದ್ಯವಾಗಬೇಕಾದರೆ ನಾವು ಸ್ವಲ್ಪ ಸಾಧನೆಯನ್ನು ಮಾಡಬೇಕಾಗುತ್ತದೆ. ಜೊತೆಗೆ ಶ್ರದ್ಧೆ-ವಿಶ್ವಾಸ-ಭಕ್ತಿಯ ಸಹಕಾರವೂ ಆವಶ್ಯಕವಾದುದು. 'ಭಕ್ತರಿಗಾಗಿಯೇ ಅವತಾರ' *(**ವಚನವೇದ**, ಸಂ. ೨, ಪು. ೧೨೧)* ಎಂಬ ಪರಮಹಂಸರ ಮಾತಿನಿಂದಲೇ ನಾವು ಇದನ್ನು ತಿಳಿಯಬಹುದು. ಈಗ ನಾವು ಶ್ರೀರಾಮಕೃಷ್ಣರ ಮತ್ತು ಏಸು ಕ್ರಿಸ್ತನ ನಡುವಿನ ಕೆಲವು ಸಾದೃಶ್ಯಗಳನ್ನು ಅವಲೋಕಿಸೋಣ.

**೧) ಜನನದಲ್ಲಿ :** ಸಾಮಾನ್ಯವಾಗಿ ಅವತಾರಪುರುಷರು ಜನ್ಮಿಸುವುದು ದುಃಖ-ದಾರಿದ್ರ್ಯಗಳಿಂದ ಕೂಡಿದ ಪರಿಸರದಲ್ಲಿ ಮತ್ತು ಧರ್ಮನಿಷ್ಠರಾದ, ಸಾತ್ವಿಕರಾದ ಭಕ್ತಿಪರಾಯಣ ದಂಪತಿಗಳ ಕುಟುಂಬದಲ್ಲಿ. ಸ್ವಾಮಿ ಶಾರದಾನಂದರು ಇದಕ್ಕೆ ಕಾರಣವನ್ನು ವಿವರಿಸುತ್ತಾರೆ: ''ಈ ರೀತಿ ದಾರಿದ್ರ್ಯಕ್ಕೂ ಮತ್ತು ಅವರ ಮುಂದಿನ ಜೀವನಕ್ಕೂ ಒಂದು ಸೂಕ್ಷ್ಮವಾದ ಸಂಬಂಧ ಇರುವಂತೆ ಕಂಡುಬರುತ್ತದೆ. ಏಕೆಂದರೆ ಮುಂದೆ ಪ್ರೌಢಾವಸ್ಥೆಯಲ್ಲಿ ಯಾರು ದುಃಖಿತರ ಕಣ್ಣೊರಸಿ ಶಾಂತಿ ನೀಡಬೇಕಾಗಿದೆಯೋ ಅವರು ಮೊದಲೇ ದುಃಖ ದಾರಿದ್ರ್ಯ ಕಷ್ಟ-ನಷ್ಟಗಳ ಪರಿಚಯವನ್ನು ಪಡೆದಿರಬೇಕಲ್ಲವೆ?..'' *('ಶ್ರೀರಾಮಕೃಷ್ಣಲೀಲಾಪ್ರಸಂಗ', ಸ್ವಾಮಿ ಶಾರದಾನಂದ, ಪೂರ್ವಕಥೆ ಮತ್ತು ಬಾಲ್ಯಜೀವನ)*

ಶ್ರೀರಾಮಕೃಷ್ಣರು ಮತ್ತು ಏಸುಕ್ರಿಸ್ತ ಇಬ್ಬರೂ ಈ ನಿಯಮಕ್ಕೆ ಅನುಗುಣವಾಗಿ ಅತ್ಯಂತ ಬಡ ಕುಟುಂಬದಲ್ಲಿ ಜನಿಸುತ್ತಾರೆ. ಶ್ರೀರಾಮಕೃಷ್ಣರ ತಾಯಿ ಚಂದ್ರಮಣಿಯು ಅವರಿಗೆ ಜನ್ಮ ನೀಡುವುದಕ್ಕೆ ಮುಂಚೆಯೇ ಅನೇಕ ದಿವ್ಯ ದರ್ಶನ - ಅನುಭವಗಳನ್ನು ಪಡೆಯುತ್ತಾಳೆ. ''ಶಿವನಿಂದ ಒಂದು ಜ್ಯೋತಿ ಬಂದು ಮಂದಿರವನ್ನೆಲ್ಲ ಆವರಿಸಿ, ಅನಂತರ... ಆ ಜ್ಯೋತಿ ನನ್ನ ಗರ್ಭವನ್ನು ಪ್ರವೇಶಿಸಿತು'' -ಇದು ಚಂದ್ರಮಣಿ ದೇವಿಯ ಅನುಭವ. ಇದೇ ರೀತಿ ಅವರ ತಂದೆ ಕ್ಷುದಿರಾಮನಿಗೆ ಗಯೆಯಲ್ಲಿ ಒಂದು ಅದ್ಭುತ ಸ್ವಪ್ನವಾಯಿತು. ಭಗವಂತನು ತನ್ನ ಮಗನಾಗಿ ಅವತರಿಸಲಿದ್ದಾನೆ ಎನ್ನುವುದು ಸ್ವಪ್ನದ ಸಾರಾಂಶವಾಗಿತ್ತು.

ಏಸುಕ್ರಿಸ್ತನ ಜೀವನದಲ್ಲಿಯೂ ಇದೇ ರೀತಿಯಾಗಿ ಅವರ ತಂದೆ-ತಾಯಿಗಳಿಗೆ ದೈವವಾಣಿಯ ಮೂಲಕ ಭಗವಂತ ತಮ್ಮ ಮಗನಾಗಿ ಅವತೀರ್ಣನಾಗಲಿದ್ದಾನೆ ಎನ್ನುವ ಸತ್ಯ ತಿಳಿಯುತ್ತದೆ. ಏಸುವಿನ ತಾಯಿ ಮೇರಿ ಇನ್ನೂ ಕುಮಾರಿಯಾಗಿದ್ದಾಗ, ಪತಿಯ ಸಂಗ ಮಾಡುವುದಕ್ಕೆ ಮೊದಲೇ ಗರ್ಭವತಿಯಾಗುತ್ತಾಳೆ. ಅವಳ ಪತಿ ಜೋಸೆಫ್‌ಗೆ ದೇವದೂತರು ಈ ವಿಷಯವನ್ನು ತಿಳಿಸಿ ಅವಳನ್ನು ಅತ್ಯಂತ ಕಾಳಜಿಯಿಂದ ನೋಡಿಕೊಳ್ಳಬೇಕೆಂದು ತಿಳಿಸುತ್ತಾರೆ. ಮೇರಿಯು ಗರ್ಭವತಿಯಾದ ಸಂದರ್ಭದಲ್ಲಿ ಅನೇಕ ಬಾರಿ ದಿವ್ಯಾವೇಶಕ್ಕೆ ಒಳಗಾಗುತ್ತಿದ್ದಳು.

ಶ್ರೀರಾಮಕೃಷ್ಣರ ಜನನದ ಸಂದರ್ಭವನ್ನು ಸ್ವಲ್ಪ ಅವಲೋಕಿಸೋಣ. ಚಂದ್ರಮಣಿ ದೇವಿ ನವಜಾತ ಶಿಶುವನ್ನು ಪ್ರಸವಿಸಿದ ಮೇಲೆ ಅವಳಿಗೆ ಸಹಾಯಕಳಾಗಿದ್ದ ಧನಿಗೆ ಅಚ್ಚರಿ ಉಂಟಾಗುತ್ತದೆ. ಕಾರಣ ಮಗು ೬ ತಿಂಗಳ ಶಿಶುವಿನಷ್ಟು ದೊಡ್ಡದಾಗಿರುತ್ತದೆ ಮತ್ತು ಆಗಲೇ ಒಲೆಯ ಹತ್ತಿರ ನುಸುಳಿಕೊಂಡು ಹೋಗಿ ಮೈಯಲ್ಲಾ ಬೂದಿ ಮಾಡಿಕೊಂಡಿದೆ. ಕ್ಷುದಿರಾಮ ಮಗುವಿನ ಜಾತಕವನ್ನು ತೋರಿಸಲು 'ಶುಭಲಗ್ನದಲ್ಲಿ ಹುಟ್ಟಿದ ಈ ಮಗು ಮುಂದೆ ಹೊಸ ಧರ್ಮಪ್ರವರ್ತಕನಾಗಿ ನಾರಾಯಣಾಂಶಸಂಭೂತನೆಂದು ಲೋಕಪ್ರಸಿದ್ಧನಾಗಿ ಎಲ್ಲರಿಂದ ಪೂಜಿಸಲ್ಪಡುವನು' ಎಂದು ಜ್ಯೋತಿಷಿಗಳು ಭವಿಷ್ಯ ನುಡಿಯುತ್ತಾರೆ.

ಅಂತೆಯೇ, ಏಸುಕ್ರಿಸ್ತನ ಜನ್ಮವಾದದ್ದು ನಮ್ಮೆಲ್ಲರಿಗೂ ತಿಳಿದಂತೆ ಒಂದು ಸತ್ರದ ಕುದುರೆಲಾಯದಲ್ಲಿ, ಒಣಹುಲ್ಲಿನ ಹಾಸಿಗೆಯ ಮೇಲೆ. ಪ್ರಯಾಣವೊಂದರ ಸಂದರ್ಭದಲ್ಲಿ ದಾರಿ ಮಧ್ಯೆ ಪ್ರಸವವೇದನೆಯಿಂದ ನರಳುತ್ತಿದ್ದ ಮೇರಿಯನ್ನು ಅವಳ ಪತಿ ಜೋಸೆಫ್ ಬೇರೆಲ್ಲಿಯೂ ಸ್ಥಳ ದೊರೆಯದ ಕಾರಣ, ಕುದುರೆಲಾಯಕ್ಕೆ ಕರೆದುಕೊಂಡು ಹೋಗುತ್ತಾನೆ. ದಿವ್ಯಶಿಶುವಿನ ಆಗಮನದ ಸುಸಂದೇಶವನ್ನು ದೇವದೂತರು ಎಲ್ಲೆಡೆಯಲ್ಲಿಯೂ ಸಾರುತ್ತಾರೆ. ಆಕಾಶದಲ್ಲಿ ಅತ್ಯಂತ ಪ್ರಕಾಶಮಾನವಾದ ನಕ್ಷತ್ರವೊಂದು ಕಾಣಿಸಿಕೊಳ್ಳುತ್ತದೆ. ಎಲ್ಲರಿಗೂ ಈ ಶುಭ ಸಂದೇಶ ತಿಳಿದು ದೇವಶಿಶುವನ್ನು ಕಾಣಲೆಂದು ಆಗಮಿಸುತ್ತಾರೆ, ಮತ್ತು ಅದರ ದಿವ್ಯರೂಪಕ್ಕೆ ಮರುಳಾಗಿ, ಅದನ್ನು ಮನಸಾರೆ ಆಶೀರ್ವದಿಸುತ್ತಾರೆ.

**೨) ಬಾಲ್ಯದಲ್ಲಿ:** 'ಬೆಳೆಯುವ ಸಿರಿ ಮೊಳಕೆಯಲ್ಲಿಯೇ' ಎನ್ನುವ ನಾಣ್ನುಡಿಯಂತೆ ಅವತಾರಪುರುಷರ ಬಾಲ್ಯಕಾಲವು ಅನೇಕ ವಿಶೇಷತೆಗಳಿಂದ ಕೂಡಿರುವುದು ಸರ್ವೇಸಾಮಾನ್ಯ. ಅವರು ತಮ್ಮಲ್ಲಿ ಅಡಗಿರುವ ಆಧ್ಯಾತ್ಮಿಕ ಶಕ್ತಿಯಿಂದ, ದಿವ್ಯಪ್ರೇಮದಿಂದ ಮತ್ತು ದೈವತ್ವದ ಪ್ರಕಾಶದಿಂದಾಗಿ ಪ್ರಾಣಿ-ಪಶು-ಮಾನವ ಎಲ್ಲಾ ವರ್ಗಗಳಿಂದಲೂ ಆಕರ್ಷಿತರಾಗುತ್ತಾರೆ. ಸದಾ ಅವರ ಸಂಗಡ ಇರಬೇಕು, ಅವರ ದಿವ್ಯ ಬಾಲಲೀಲೆಗಳನ್ನು ಕೇಳಿ-ನೋಡಿ ಆನಂದಿಸಬೇಕೆನ್ನುವ ಹಂಬಲ ಎಲ್ಲರಲ್ಲೂ ಜಾಗೃತವಾಗುತ್ತದೆ. ತಮ್ಮ ಬಾಲಲೀಲೆಗಳಿಂದ ಜೀವಿಗಳಲ್ಲಿ ಸುಪ್ತವಾಗಿದ್ದ ಆಧ್ಯಾತ್ಮಿಕ ಭಾವಗಳನ್ನು ಹೊರಹೊಮ್ಮಿಸಿ, ಅವರು ಅದರಲ್ಲಿಯೇ ತನ್ಮಯರಾಗುವಂತೆ ಮಾಡುತ್ತಾರೆ.

ಬಾಲಕ ಗದಾಧರನ (ಶ್ರೀರಾಮಕೃಷ್ಣರ) ಬಾಲಲೀಲೆಗಳು ಬಾಲಗೋಪಾಲನ ಲೀಲೆಗಳಂತೆ ಅತ್ಯಂತ ಮಧುರವಾದವುಗಳು. ಬಾಲಕ ಗದಾಧರನು ತನ್ನ ಪ್ರೇಮಪೂರ್ಣ ಸದ್ವರ್ತನೆ, ಮುಗ್ಧತೆ, ಅದ್ಭುತ ಮೇಧಾಶಕ್ತಿ ಮುಂತಾದವುಗಳಿಂದ ತನ್ನ ಬಾಲ್ಯಸ್ನೇಹಿತರಿಗೆ ಮತ್ತು ಹಳ್ಳಿಗರೆಲ್ಲರಿಗೆ ಪ್ರೀತಿ ಪಾತ್ರನಾಗಿದ್ದ. ಗದಾಧರನು ತನ್ನ ಬಾಲ್ಯಸ್ನೇಹಿತರೊಡಗೂಡಿ ಹೊಲಗದ್ದೆಗಳಲ್ಲಿ ಸ್ವೇಚ್ಛೆಯಿಂದ ಓಡಾಡುತ್ತಿದ್ದನು. ಹಳ್ಳಿಯ ಮನೆಮನೆಗೂ ಹೋಗಿ ಅವರು ನೀಡಿದ ತಿಂಡಿಯನ್ನು ಆನಂದದಿಂದ ತಿನ್ನುತ್ತಿದ್ದನು. ಒಂದು ದಿನ ಆಕಾಶದಲ್ಲಿ ಕಾರ್ಮೋಡ ಆವರಿಸಿದ ಸಂದರ್ಭದಲ್ಲಿ ಬೆಳ್ಳಕ್ಕಿಯ ಸಾಲೊಂದು ಹಾರುತ್ತಿರುವ ಸುಂದರ ದೃಶ್ಯವನ್ನು ಕಂಡು ಭಾವೋನ್ಮತ್ತತೆಯಿಂದ ಬಾಹ್ಯಪ್ರಜ್ಞೆಯನ್ನು ಕಳೆದುಕೊಂಡನು. ಇದೇ ಶ್ರೀರಾಮಕೃಷ್ಣರ ಪ್ರಥಮ ಭಾವಾವಸ್ಥೆ.

ಏಸುವಿನ ಬಾಲ್ಯದಲ್ಲಿಯೂ ನಾವು ಈ ರೀತಿಯ ಘಟನೆಗಳನ್ನು ಕಾಣಬಹುದು. ಆತನು ತನ್ನ ದಿವ್ಯಪ್ರೇಮದ ಮೂಲಕ ವನ್ಯ ಪ್ರಾಣಿ-ಪಕ್ಷಿಗಳನ್ನು ತನ್ನೆಡೆಗೆ ಆಕರ್ಷಿಸಿ ಅತ್ಯಂತ ಪ್ರೀತಿ-ಕಾರುಣ್ಯದಿಂದ ಅವುಗಳಿಗೆ ಆಹಾರ ನೀಡುತ್ತಿದ್ದನು. ಏಸುವಿಗೆ ಹನ್ನೆರಡು ವರ್ಷ ವಯಸ್ಸಾಗಿದ್ದಾಗ ಒಮ್ಮೆ ಅವರ ತಂದೆ-ತಾಯಿ

ಯರು ತಮ್ಮ ಮಗನನ್ನು ಕರೆದುಕೊಂಡು ನಜರತ್‌ನಿಂದ ಜೆರೊಸಲೇಮಿಗೆ ಯಾತ್ರೆ ಹೊರಟರು. ಯಹೂದಿಗಳಿಗೆ ಅದೊಂದು ಪ್ರಸಿದ್ಧ ಪವಿತ್ರ ತೀರ್ಥಸ್ಥಾನ. ದೇವರ ದರ್ಶನದ ನಂತರ ಹಿಂದಿರುಗಿ ತಮ್ಮ ಯಾತ್ರಿಕರ ತಂಡದೊಂದಿಗೆ ಹೋಗುತ್ತಿದ್ದರು. ತುಂಬ ದೂರ ಹೋದ ಮೇಲೆ ತಮ್ಮ ಮಗ ಕಾಣಿಸದಿರಲು ಅವನಿಗಾಗಿ ಗಾಬರಿಯಿಂದ ಹುಡುಕಾಡಿದರು. ಅವರು ಕಾತರರಾಗಿ ಅಲ್ಲಿಂದ ಮತ್ತೆ ಜರೊಸಲೇಮಿಗೆ ಬಂದು, ದೇವಾಲಯದ ಒಳಗೆ ಏಸುವನ್ನು ಕಂಡರು. ಅವನು ಅಲ್ಲಿ ಅನೇಕ ಪಂಡಿತರೊಡನೆ ಶಾಸ್ತ್ರ ಚರ್ಚೆ ನಡೆಸುತ್ತಿದ್ದನು ಮತ್ತು ಶಾಸ್ತ್ರದ ಅತ್ಯಂತ ಜಟಿಲ ಪ್ರಶ್ನೆಗಳಿಗೆ ಸಮಾಧಾನವನ್ನು ಸೂಚಿಸುತ್ತಾ ನೆರೆದಿದ್ದ ಪಂಡಿತರುಗಳನ್ನು ಅಚ್ಚರಿಗೊಳಿಸುತ್ತಿದ್ದನು. (*'ಲೀಲಾಪ್ರಸಂಗ'* ದಿಂದ)

ಶ್ರೀರಾಮಕೃಷ್ಣರ ಬಾಲ್ಯದಲ್ಲಿ ನಡೆದ ಇದೇ ರೀತಿಯ ಒಂದು ಘಟನೆಯನ್ನೂ ಇಲ್ಲಿ ಸ್ಮರಿಸಬಹುದು. ಬಾಲಕ ಗದಾಧರನು ಒಮ್ಮೆ ಯಾವುದೋ ಒಂದು ಜಟಿಲವಾದ ಪ್ರಶ್ನೆಯನ್ನು ತೆಗೆದುಕೊಂಡು ಆ ಭಾಗದ ಪ್ರಸಿದ್ಧ ಪಂಡಿತರುಗಳು ವಾದ- ವಿವಾದದಲ್ಲಿ ನಿರತರಾಗಿರುವುದನ್ನು ಅತ್ಯಂತ ಉತ್ಸಾಹದಿಂದ ಕೇಳುತ್ತಿದ್ದ. ಎಷ್ಟೇ ಚರ್ಚಿಸಿದರೂ ಒಂದು ನಿರ್ದಿಷ್ಟವಾದ ನಿರ್ಣಯಕ್ಕೆ ಬರಲು ಅವರಿಗೆ ಸಾಧ್ಯವಾಗದೆ ಇರುವಾಗ ಗದಾಧರನು ಅತ್ಯಂತ ಸ್ಪಷ್ಟವಾಗಿ ಈ ಸಮಸ್ಯೆಗೆ ಪರಿಹಾರ ಸೂಚಿಸಿದನು. ಪಂಡಿತರೆಲ್ಲರಿಗೂ ಅತ್ಯಾಶ್ಚರ್ಯವಾಗಿ, ಯಾವುದೋ ದಿವ್ಯಶಕ್ತಿ ಅವನ ಮೂಲಕ ಕೆಲಸ ಮಾಡುತ್ತಿದೆ ಎಂದು ತಿಳಿದು ಗದಾಧರನನ್ನು ಗೌರವ, ಭಕ್ತಿ ಭಾವಗಳಿಂದ ಪ್ರಶಂಸಿಸಿದರು.

**೩) ಸಾಧನಾವಧಿಯಲ್ಲಿ:** ಅವತಾರಪುರುಷರೂ ಸಹ ಎಲ್ಲರಂತೆ ಸಾಧನೆ ಮಾಡಿ ಸಿದ್ಧಿ ಪಡೆಯಬೇಕೆ? ಹಾಗಾದರೆ ಅವರು ಸಾಧನೆಗಿಂತ ಮುಂಚೆ ಅಪರಿಪೂರ್ಣರಾಗಿದ್ದರೆ? ಅಪರಿಪೂರ್ಣರಾದವರನ್ನು ಅವತಾರರೆಂದು ಏಕೆ ಕರೆಯಬೇಕು? ಅವರೂ ಸಹ ಸಾಮಾನ್ಯರಂತೆ ರೋಗ-ರುಜಿನ, ಸುಖ-ದುಃಖ ಮುಂತಾದ ದ್ವಂದ್ವಗಳಿಗೆ ಒಳಗಾಗುವುದನ್ನು ಹೇಗೆ ಒಪ್ಪಿಕೊಳ್ಳುವುದು? ಹೀಗೆ ನಮ್ಮಲ್ಲಿ ಅನೇಕರಿಗೆ ಈ ಸಂದೇಹಗಳ ಮಹಾಪೂರವೇ ಹರಿಯುತ್ತಿರುತ್ತದೆ. ಈ ವಿಷಯದ ಬಗ್ಗೆ ಸ್ವಾಮಿ ಶಾರದಾನಂದಜಿಯವರು **'ಶ್ರೀರಾಮಕೃಷ್ಣ ಲೀಲಾಪ್ರಸಂಗ'**ದಲ್ಲಿ ಅತ್ಯಂತ ಮನೋಜ್ಞವಾಗಿ ವಿವರಿಸಿದ್ದಾರೆ. ''ಭಕ್ತನಿಗೆ ತನ್ನ ಆರಾಧ್ಯ ದೇವತೆ ಪರಿಪೂರ್ಣ ವ್ಯಕ್ತಿ. ನರಶರೀರ ಧಾರಣೆ ಮಾಡಿದ್ದರೂ ಮಾನವ ಸಹಜ ದುರ್ಬಲತೆ, ಅಪರಿಪೂರ್ಣತೆಗಳು ಅವನಲ್ಲಿಯೂ ಇದ್ದವು ಎಂಬುದನ್ನು ಅವನ ಮನಸ್ಸು ಒಪ್ಪದು... ತಮ್ಮ ಈಶ್ವರೀಯ ಸ್ವರೂಪವನ್ನು ಸಾಧಾರಣ ಜನರು ಗ್ರಹಿಸಬಾರದೆಂದು ಅವತಾರ ಪುರುಷರು, ಸಾಧನೆಯೇ ಮುಂತಾದ ಮಾನಸಿಕ ಕ್ರಿಯೆಗಳ ಹಾಗೂ ಆಹಾರ, ನಿದ್ರೆ, ದಣಿವು, ವ್ಯಾಧಿ ಮುಂತಾದ ಶಾರೀರಿಕ ಅವಸ್ಥೆಗಳ ಸೋಗು ಹಾಕಿಕೊಳ್ಳುತ್ತಾರೆ ಎಂದು ಭಕ್ತರು ಭಾವಿಸುವುದರಲ್ಲಿ ಆಶ್ಚರ್ಯವಿಲ್ಲ... ತನ್ನ ದುರ್ಬಲತೆಯಿಂದಾಗಿಯೇ ಭಕ್ತ ಈ ರೀತಿ ಭಾವಿಸುತ್ತಾನೆ ಎನಿಸುತ್ತದೆ... ಭಕ್ತಿಯ ಅಪರಿಪಕ್ವತೆ ಇದಕ್ಕೆ ಕಾರಣ.'' (*'ಲೀಲಾಪ್ರಸಂಗ'*, ಸಾಧಕ ಭಾವ). ಈ ಕಾರಣದಿಂದಾಗಿಯೇ ಅನೇಕ ಅವತಾರ ಪುರುಷರ ಸಾಧನಾವಧಿಯ ಮಾಹಿತಿ ನಮಗೆ ಲಭಿಸುವುದಿಲ್ಲ. ಅವರು ಮಾಡಿದ ಸಾಧನೆಯ ವಿವರಕ್ಕಿಂತಲೂ ನಂತರ ಜೀವನದಲ್ಲಿ ಅವರು ಮಾಡಿದ ಪವಾಡ, ಮಹತ್ಕಾರ್ಯಗಳು ಮುಂತಾದವುಗಳ ಬಗ್ಗೆ ಹೆಚ್ಚಿನ ಮಾಹಿತಿ ಲಭಿಸುತ್ತದೆ.

ಏಸುಕ್ರಿಸ್ತನ ವಿಷಯದಲ್ಲಿಯೂ ಈ ಅಂಶ ಸತ್ಯವಾಗಿದೆ. ಏಸುಕ್ರಿಸ್ತನು ಧರ್ಮಪ್ರಚಾರಕನಾಗಿ ಪ್ರಸಿದ್ಧಿಗೆ ಬಂದದ್ದು ಮೂವತ್ತನೇ ವಯಸ್ಸಿನಲ್ಲಿ. ಬಾಲ್ಯಕಾಲದಿಂದ ಮೂವತ್ತನೇ ವಯಸ್ಸಿನ ನಡುವೆ ಅವನ ಜೀವಿತಾವಧಿಯ ವಿವರಗಳು ನಮಗೆ ಸ್ಪಷ್ಟವಾಗಿ ಲಭಿಸುವುದಿಲ್ಲ. ಆತ ಯಾವ ರೀತಿಯ ಸಾಧನೆ ಮಾಡಿದ ಎನ್ನುವುದನ್ನು ಅವನ ಭಕ್ತರು ದಾಖಲು ಮಾಡದೆ ಇರುವುದಕ್ಕೆ ಮೇಲಿನ ಕಾರಣವೂ ಇರಬಹುದು. ಕೆಲವರ ಪ್ರಕಾರ ಏಸುಕ್ರಿಸ್ತನು ಉತ್ತರ ಭಾರತದ ಪ್ರದೇಶದಲ್ಲಿ ತೀವ್ರ ತಪಸ್ಸನ್ನು ಆಚರಿಸಿದನೆಂದು ಹೇಳುತ್ತಾರೆ. ಈ ಬಗ್ಗೆ 'ಲೀಲಾಪ್ರಸಂಗ'ದಲ್ಲಿ ಸ್ವಾಮಿ ಶಾರದಾನಂದರು ದಾಖಲಿಸಿರುವಂತೆ, ಕ್ರಿಸ್ತನ ಬಾಲ್ಯದ ಹನ್ನೆರಡು ವರ್ಷಗಳ ಕೆಲವು ಘಟನೆಗಳು ನಮಗೆ ದೊರೆಯುತ್ತವೆ. ಆನಂತರ ಅವನು ತನ್ನ ಮೂವತ್ತನೆ ವಯಸ್ಸಿನಲ್ಲಿ ದೀಕ್ಷೆಯನ್ನು ಪಡೆದು ಒಂದು ಮರುಭೂಮಿಯಲ್ಲಿ ನಲವತ್ತು ದಿನ ಧ್ಯಾನ, ತಪಸ್ಸು ಮಾಡಿದ ವಿಷಯ ಬರುತ್ತದೆ. ಅಲ್ಲಿ ಅವನು ಸೈತಾನನಿಂದ ಪ್ರಲೋಭನೆಗೆ ಒಳಪಟ್ಟು ಆ ಹೋರಾಟದಲ್ಲಿ ಜಯಶೀಲನಾಗಿ ಹಿಂದಿರುಗಿ ಬರುತ್ತಾನೆ. ಅನಂತರ ಅವನು ಲೋಕಕಲ್ಯಾಣ ಕಾರ್ಯದಲ್ಲಿ ತೊಡಗುತ್ತಾನೆ. ಬಳಿಕ ಅವನು ಕೇವಲ ಮೂರು ವರ್ಷಗಳು ಮಾತ್ರವೇ ಸ್ಥೂಲ ಶರೀರದಲ್ಲಿದ್ದನು. ಅವನು ಹನ್ನೆರಡನೇ ವರ್ಷದಿಂದ ಮೂವತ್ತನೇ ವರ್ಷದವರೆಗೆ ಹೇಗೆ ಕಾಲವನ್ನು ಕಳೆದ ಎಂಬುದರ ಬಗ್ಗೆ ಯಾವ ಮಾಹಿತಿಯೂ ದೊರೆಯುವುದಿಲ್ಲ. (*'ಲೀಲಾಪ್ರಸಂಗ'*, ಮಧುರಭಾವ)

ಇದಕ್ಕೆ ವ್ಯತಿರಿಕ್ತವಾಗಿ ಶ್ರೀರಾಮಕೃಷ್ಣರ ಸಾಧನಾವಧಿಯ ಸ್ಪಷ್ಟ ಮಾಹಿತಿಯನ್ನು ನಾವು ಕಾಣಬಹುದು. ಅವತಾರ ಪುರುಷರ ಸಾಧನೆ, ಹೋರಾಟಗಳ ಬಗ್ಗೆ ಶ್ರೀರಾಮಕೃಷ್ಣರು ಹೇಳುವಂತೆ, ''ನರಲೀಲೆಯಲ್ಲಿ ಎಲ್ಲಾ ಕಾರ್ಯಗಳೂ ಸಾಮಾನ್ಯ ಮನುಷ್ಯರದಂತೆಯೇ ಇರುತ್ತವೆ. ಭಗವಂತನು ಶರೀರವನ್ನು ಧಾರಣೆ ಮಾಡಿದರೆ ನರರಂತೆಯೇ ಸುಖ-ದುಃಖಗಳನ್ನು ಅನುಭವಿಸಬೇಕಾಗುತ್ತದೆ, ನರರಂತೆಯೇ ತಪಸ್ಸು, ಸಾಧನೆಗಳ ಮೂಲಕ ಪೂರ್ಣತ್ವವನ್ನು ಪಡೆಯಬೇಕಾಗುತ್ತದೆ.'' ಈ ಬಗ್ಗೆ ಸ್ವಾಮಿ ಶಾರದಾನಂದರ ಅಭಿಪ್ರಾಯ ಹೀಗಿದೆ - ''ನರದೇಹವನ್ನು ಪಡೆದ ಮೇಲೆ ಅವತಾರ ಪುರುಷರೂ ನಮ್ಮಂತೆಯೇ ಸ್ವಲ್ಪ ಮಟ್ಟಿಗೆ ಅಜ್ಞಾನಾದಿಗಳನ್ನು ಅನುಭವಿಸಬೇಕಾಗುತ್ತದೆ. ನಮ್ಮಂತೆಯೇ ಸಾಧನೆ ಮಾಡಿ ಅವನ್ನು ಮೀರಿಹೋಗಬೇಕು. ಎಲ್ಲಿಯ

ವರೆಗೆ ಆ ಸ್ಥಿತಿಯಲ್ಲಿರುವರೋ ಅಲ್ಲಿಯವರೆಗೆ ಅವರಿಗೆ ತಮ್ಮ ದಿವ್ಯತೆಯ ಅನುಭವ ಆಗಾಗ ಆಗುತ್ತಿರುತ್ತದೆ, ಆದರೆ ಮರು ಕ್ಷಣವೇ ಅದು ಮುಸುಕಿಬಿಡುತ್ತದೆ...'' *('ಲೀಲಾಪ್ರಸಂಗ', ಸಾಧಕ ಭಾವ)*

ಶ್ರೀರಾಮಕೃಷ್ಣರು ಸತತ ಹನ್ನೆರಡು ವರ್ಷಗಳವರೆಗೆ ನಾನಾ ಮತಧರ್ಮಗಳ ಸಾಧನೆಗಳನ್ನು ನಿರಂತರವಾಗಿ ಮಾಡಿ ಅದರಲ್ಲಿ ಸಿದ್ಧಿಯನ್ನು ಪಡೆದು, ಕೊನೆಗೆ ಎಲ್ಲ ಮತಗಳು ಒಬ್ಬನೇ ಭಗವಂತ ನೆಡೆಗೆ ಕರೆದೊಯ್ಯುತ್ತವೆ ಎನ್ನುವ ಸತ್ಯವನ್ನು ಮನಗಾಣಿಸುತ್ತಾರೆ. ಅವರು ಕ್ರೈಸ್ತಧರ್ಮ ಸಾಧನೆಯಲ್ಲಿ ಸತತ ಮೂರು ದಿನಗಳನ್ನು ಕಳೆದು ಏಸುಕ್ರಿಸ್ತನ ಸಾಕ್ಷಾತ್ಕಾರ ಮಾಡಿಕೊಳ್ಳುತ್ತಾರೆ. ಯದು ಮಲ್ಲಿಕನ ತೋಟದ ಮನೆಯಲ್ಲಿ ಏಸುವಿನ ಪಟವನ್ನು ನೋಡಿ ಭಾವಸಮಾಧಿಯನ್ನು ಹೊಂದುತ್ತಾರೆ. ಏಸುಕ್ರಿಸ್ತನು ಆ ಪಟ ದಿಂದ ಕೆಳಕ್ಕೆ ಇಳಿದು ಬಂದು ಅವರಲ್ಲಿ ಐಕ್ಯವಾದಂತೆ ಅವರಿಗೆ ಅನುಭವವಾಗುತ್ತದೆ. ಬಹುಕಾಲದ ನಂತರ ತಮ್ಮ ಶಿಷ್ಯರಿಗೆ ಏಸು ವಿನ ಶಾರೀರಿಕ ಲಕ್ಷಣಗಳನ್ನು ಸ್ಪಷ್ಟವಾಗಿ ವಿವರಿಸುವಾಗ ಬೈಬಲ್ ಮತ್ತು ಅವರ ಮಾತಿನಲ್ಲಿರುವ ಸಾಮ್ಯತೆಗಳನ್ನು ಕಂಡು ಅಚ್ಚರಿ ಯಾಗುತ್ತದೆ. ಪಂಚವಟಿಯಲ್ಲಿ ಏಸುವಿನ ದರ್ಶನದ ಸಮಯ ದಲ್ಲಿ ಅವರ ಹೃದಯದಿಂದ ಮೂಡಿದ ಈ ನುಡಿಗಳಿಲ್ಲಿ ಸ್ಮರ ಣೀಯ: ''ಇವನೇ ಏಸುಕ್ರಿಸ್ತ, ಜೀವಿಗಳನ್ನು ದುಃಖ, ಯಾತನೆ ಗಳಿಂದ ಮುಕ್ತಗೊಳಿಸಲು ಹೃದಯದ ನೆತ್ತರನ್ನು ಸುರಿಸಿದವನು, ಮಾನವನ ಕೈಯಿಂದ ಅಸಾಧ್ಯ ಯಾತನೆಯನ್ನು ಅನುಭವಿಸಿ ದವನು. ಇವನೇ ಆ ಯೋಗಿವರ, ಭಕ್ತ ಏಸುಕ್ರಿಸ್ತ.''

*('ಲೀಲಾ ಪ್ರಸಂಗ', ಸಾಧಕ ಭಾವ)*

**೪) ಗುರುಭಾವದಲ್ಲಿ:** ಶ್ರೀರಾಮಕೃಷ್ಣರಿಗೆ ತಮ್ಮ ಶಿಷ್ಯನಾದ ನರೇಂದ್ರನಾಥನ ಮೇಲೆ ಅಪಾರ ವಿಶ್ವಾಸ ಮತ್ತು ಅದಮ್ಯ ಪ್ರೀತಿಯಿತ್ತು. ಈ ಪ್ರೀತಿ-ವಿಶ್ವಾಸಗಳಿಂದಲೇ ಶಿಷ್ಯನನ್ನು ವಾತ್ಸಲ್ಯ ಸಂಕೋಲೆಯಿಂದ ಬಂಧಿಸುತ್ತಿದ್ದರು. ನರೇಂದ್ರನನ್ನು ಅವರು ಪ್ರೀತಿಸುತ್ತಿದ್ದಂತೆ ಬೇರೆ ಯಾರನ್ನೂ ಪ್ರೀತಿಸಲಿಲ್ಲ ಎಂದೇ ಹೇಳ ಬಹುದು. ಈ ಬಗ್ಗೆ ಒಮ್ಮೆ ನರೇಂದ್ರನಾಥನು ಅವರನ್ನು ಕಟು ವಾಗಿ ನಿಂದಿಸುತ್ತಾ ಹೇಳುತ್ತಿದ್ದ, ''ಭರತರಾಜನು ಹರಿಣವನ್ನು ಚಿಂತಿಸುತ್ತಾ ಸಾವಿನ ನಂತರ ಹರಿಣವೇ ಆದ ಎಂದು ಪುರಾಣ ದಲ್ಲಿದೆ. ಇದು ಸತ್ಯವಾದರೆ ನನ್ನ ಬಗ್ಗೆ ಈ ರೀತಿ ಚಿಂತಿಸುವುದರ ಪರಿಣಾಮ ಏನಾದೀತು ಎಂಬುದರ ಬಗ್ಗೆ ನೀವು ಸ್ವಲ್ಪ ಆಲೋ ಚಿಸಬೇಕು.'' ಬಾಲಕ ಸ್ವಭಾವದ ಶ್ರೀರಾಮಕೃಷ್ಣರು ಈ ಮಾತನ್ನು ಕೇಳಿ ತುಂಬಾ ಚಿಂತಿತರಾಗಿ, ''ನೀನು ಸರಿಯಾಗಿಯೇ ಹೇಳಿದೆ. ಹೌದು. ಹಾಗಾದರೆ ಏನಾಗುವುದು? ನನಗೆ ಮಾತ್ರ ನಿನ್ನನ್ನು ನೋಡದೆ ಇರಲಾಗುವುದಿಲ್ಲ.'' ಈ ವಿಷಯವಾಗಿ ಅವರು ಜಗ ನ್ಮಾತೆಯ ಬಳಿ ತಮ್ಮ ಅಳಲನ್ನು ತೋಡಿಕೊಂಡಾಗ ಜಗನ್ಮಾತೆಯು ಅವರಿಗೆ ಹೀಗೆ ಉತ್ತರಿಸುತ್ತಾಳೆ: ''ನೀನು ಅವನನ್ನು ನಾರಾಯಣ ನೆಂದೇ ತಿಳಿದಿರುವುದರಿಂದ ಅಷ್ಟೊಂದು ಪ್ರೀತಿಸುತ್ತೀಯ. ಎಂದು ನೀನು ಅವನಲ್ಲಿ ನಾರಾಯಣನನ್ನು ನೋಡುವುದಿಲ್ಲವೊ ಅಂದು ಅವನ ಮುಖವನ್ನೂ ನೋಡಲಾರೆ.'' *('ಲೀಲಾಪ್ರಸಂಗ', ದಿವ್ಯಭಾವ)* ಹೀಗೆ ಅವರು ತಮ್ಮ ಶಿಷ್ಯನ ಶ್ರೇಷ್ಠತೆಯನ್ನು ಪ್ರಶಂ ಸಿಸುತ್ತಾ, ಲೋಕಶಿಕ್ಷಣ ಕಾರ್ಯಕ್ಕೆ ಅವನನ್ನು ಪ್ರೇರೇಪಿಸುತ್ತಾರೆ.

ಇದೇ ರೀತಿ ಏಸುಕ್ರಿಸ್ತನು ಸಹ ತಮ್ಮ ಶಿಷ್ಯವೃಂದವನ್ನು ಬಹಳ ವಾಗಿ ಪ್ರೀತಿಸುತ್ತಿದ್ದನು, ಅವರಿಗೆ ಆಶ್ರಯನೀಡಿ ತನ್ನ ಮುಂದಿನ ಜೀವಿಗಳ ಉದ್ಧಾರ ಕಾರ್ಯದಲ್ಲಿ ಅವರಿಗೆ ಯೋಗ್ಯ ಶಿಕ್ಷಣವನ್ನು ನೀಡುತ್ತಿದ್ದನು. ಒಮ್ಮೆ ಏಸುಕ್ರಿಸ್ತನು ಒಬ್ಬ ಶ್ರೇಷ್ಠ ಶಿಷ್ಯನನ್ನು ಪಡೆ ದಾಗ ಹೀಗೆ ಹೇಳಿದನು: ''ಪರ್ವತಸದೃಶ ಅಚಲ ಶ್ರದ್ಧಾಸಂಪನ್ನ ನಾದ ಈ ವ್ಯಕ್ತಿಯ ಜೀವನವನ್ನು ಆಧಾರವಾಗಿಟ್ಟುಕೊಂಡು ನಾನು ನನ್ನ ಆಧ್ಯಾತ್ಮಿಕ ಮಂದಿರವನ್ನು ನಿರ್ಮಾಣ ಮಾಡುತ್ತೇನೆ.' *('ಲೀಲಾ ಪ್ರಸಂಗ', ದಿವ್ಯಭಾವ).*

ಅವತಾರ ಪುರುಷರು ತಮ್ಮ ದಿವ್ಯಸ್ಪರ್ಶದಿಂದ ಭಕ್ತರಲ್ಲಿನ ಭಾವವನ್ನು ಪರಿವರ್ತನೆ ಮಾಡಲು ಸಮರ್ಥರಾಗುತ್ತಾರೆ. ಶ್ರೀರಾಮಕೃಷ್ಣರು ಒಮ್ಮೆ ಅದ್ವೈತ ತತ್ತ್ವವನ್ನು ಹೀಯಾಳಿಸುತ್ತಿದ್ದ ನರೇಂದ್ರನನ್ನು ಸ್ಪರ್ಶಿಸಿ, ಅವನಲ್ಲಿ ಭಾವಪರಿವರ್ತನೆಯನ್ನು ಉಂಟುಮಾಡುತ್ತಾರೆ. ತತ್‌ಕ್ಷಣವೇ ನರೇಂದ್ರನಲ್ಲಿ ಸಂಪೂರ್ಣ ಬದಲಾವಣೆ ಉಂಟಾಗಿ ಒಂದು ಹೊಸ ಅನುಭವವನ್ನು ಪಡೆಯುತ್ತಾನೆ. ಕಾಶೀಪುರದಲ್ಲಿ ಒಮ್ಮೆ ಕಲ್ಪತರು ದಿನದಂದು ವೈಕುಂಠನೆಂಬ ಶಿಷ್ಯನಿಗೆ ಇದೇ ರೀತಿ ಅವರ ದಿವ್ಯಸ್ಪರ್ಶದಿಂದ ಭಾವಪರಿವರ್ತನೆಯಾಗುತ್ತದೆ. ಇಂತಹ ಅನೇಕ ಘಟನೆಗಳನ್ನು ಅವರ ಜೀವನ ಲೀಲಾನಾಟಕದಲ್ಲಿ ನಾವು ಕಾಣಬಹುದು. ಏಸುಕ್ರಿಸ್ತನ ಜೀವನದಲ್ಲಿಯೂ ಇಂತಹ ಘಟನೆಗಳು ಯಥೇಚ್ಛ ವಾಗಿ ಲಭಿಸುತ್ತವೆ. ಕ್ರಿಸ್ತನು ಒಮ್ಮೆ ವೇಶ್ಯೆಯಾದ ಮೇರಿಯನ್ನು ಸ್ಪರ್ಶಿಸಿ ಆಕೆಗೆ ಹೊಸ ಜೀವನವನ್ನು ಕೊಡುತ್ತಾನೆ. ಅದೇ ರೀತಿ ಅನೇಕ ಕುಷ್ಠರೋಗಿಗಳನ್ನು ತನ್ನ ಅದ್ಭುತ ದಿವ್ಯಸ್ಪರ್ಶದಿಂದ ರೋಗಮುಕ್ತರನ್ನಾಗಿ ಮಾಡಿದುದನ್ನು ಇಲ್ಲಿ ಸ್ಮರಿಸಬಹುದು. ಶ್ರೀರಾಮಕೃಷ್ಣರು ಸಹ ಒಮ್ಮೆ ಇದೇ ರೀತಿ ಕುಷ್ಠರೋಗಿಯೊಬ್ಬನ ಬೇಡಿಕೆಗೆ ಮಣಿದು ಕೃಪಾಪರವಶರಾಗಿ ಹೀಗೆ ಹೇಳುತ್ತಾರೆ, ''ನನಗೇನೂ ತಿಳಿಯದಪ್ಪ. ಕೈ ಆಡಿಸಬೇಕೆಂದು ನೀನು ಹೇಳು ತ್ತಿರುವೆ, ಹಾಗೆಯೇ ಮಾಡುತ್ತೇನೆ. ತಾಯಿಯ ಇಚ್ಛೆಯಿದ್ದರೆ ವಾಸಿಯಾಗುವುದು.'' ಹೀಗೆ ಹೇಳಿ ಅವನ ದೇಹದ ಮೇಲೆ ಕೈ ಆಡಿಸುತ್ತಾರೆ. ಅಂದು ಇಡೀ ದಿನವೂ ಅವರ ಕೈಯಲ್ಲಿ ತೀವ್ರ ವೇದನೆಯುಂಟಾಯಿತು. ''ಅವನ ರೋಗ ಗುಣವಾಯಿತು. ಆದರೆ ಅವನ ಕಷ್ಟಭೋಗವನ್ನು ಇದು (ತಮ್ಮ ದೇಹವನ್ನು ತೋರಿಸಿ) ಅನುಭವಿಸಬೇಕಾಯಿತು'' ಎಂದು ಅವರು ನಂತರ ಹೇಳಿದರು. *('ಲೀಲಾ ಪ್ರಸಂಗ', ಗುರುಭಾವ).*

ಒಂದು ದಿನ ರಾಣಿ ರಾಸಮಣಿ ಕಾಳಿಮಂದಿರಕ್ಕೆ ಬಂದು ಜಗನ್ಮಾತೆಗೆ ನಮಸ್ಕರಿಸಿ ಹತ್ತಿರದ ಆಸನದ ಮೇಲೆ ಕುಳಿತಳು. ಅಲ್ಲಿಯೇ ಶ್ರೀರಾಮಕೃಷ್ಣರು ಇದ್ದುದ್ದನ್ನು ಕಂಡು ದೇವಿಯ

ಮೇಲೆ ಹಾಡನ್ನು ಹಾಡಲು ಅವರನ್ನು ಕೇಳಿಕೊಂಡಳು. ಅವಳ ವಿನಂತಿಗೆ ಮಣಿದು ಅವರು ಹಾಡತೊಡಗಿದರು. ಸ್ವಲ್ಪ ಹೊತ್ತಿನ ನಂತರ ಹಠಾತ್ತನೆ ಹಾಡುವುದನ್ನು ನಿಲ್ಲಿಸಿ ಕೋಪದಿಂದ ''ಇಲ್ಲಿಯೂ ಅದೇ ಚಿಂತೆಯೆ?'' ಎಂದು ಹೇಳುತ್ತಾ ರಾಣಿಯ ಕೆನ್ನೆಯ ಮೇಲೆ ಹೊಡೆದರು. ಶ್ರೀ ಜಗನ್ಮಾತೆಯನ್ನು ಧ್ಯಾನಿಸದೆ, ಯಾವುದೋ ಕೋರ್ಟುಕೇಸಿನ ಬಗ್ಗೆ ಚಿಂತಿಸುತ್ತಿದ್ದ ರಾಣಿಯೂ ಪಶ್ಚಾತ್ತಾಪದಿಂದ ಗಂಭೀರವಾಗಿ ಕುಳಿತಳು. ಈ ವಿಷಯ ಅವರಿಗೆ ಹೇಗೆ ತಿಳಿಯಿತು ಎಂಬ ವಿಸ್ಮಯ ಅವಳಿಗೆ. ಅಂತರ್ಯಾಮಿ ಶ್ರೀರಾಮಕೃಷ್ಣರಿಗೆ ಯಾವುದು ತಾನೆ ಸಾಧ್ಯವಿಲ್ಲ?

ಏಸುಕ್ರಿಸ್ತನ ಜೀವನದಲ್ಲಿಯೂ ಇಂತಹುದೇ ಪ್ರಸಂಗ ವೊಂದು ಬರುತ್ತದೆ. ಶಿಷ್ಯಪರಿವಾರ ಸಮೇತನಾಗಿ ಏಸುಕ್ರಿಸ್ತನು ಜೆರೂಸಲೇಂ ದೇವಸ್ಥಾನಕ್ಕೆ ಹೋದನು. ಆ ಪವಿತ್ರಸ್ಥಾನದ ದರ್ಶನವಾಗುತ್ತಿದ್ದಂತೆಯೇ ಭಾವೋನ್ಮತ್ತನಾಗಿ ಭಗವದ್ದರ್ಶನ ಕ್ಕಾಗಿ ಓಡಿದನು. ಮಂದಿರದ ಬಾಗಿಲಿನಲ್ಲಿ ಮತ್ತು ಅಂಗಳದಲ್ಲಿ ಅನೇಕರು ಜನರನ್ನು ಮೋಸಪಡಿಸಿ ಹಣ ಸಂಪಾದನೆಯಲ್ಲಿ ನಿರತ ರಾಗಿದ್ದರು. ಪುರೋಹಿತರು, ಅರ್ಚಕರು ಯಾತ್ರಿಕರಿಂದ ಹಣ ಸುಲಿಯುವುದರಲ್ಲಿಯೇ ಮಗ್ನರಾಗಿದ್ದರು. (ಈ ಕಾರ್ಯ ಅದೆಷ್ಟು ಪುರಾತನವಾಗಿದೆ ಅಲ್ಲವೆ? ಈಗಲೂ ಜಾರಿಯಲ್ಲಿದೆ!). ನೇರವಾಗಿ ಮಂದಿರದೊಳಗೆ ಹೋಗಿ ಏಸುಕ್ರಿಸ್ತನು ದೇವರ ದರ್ಶನವನ್ನು ಪಡೆದು ಪರಮಾನಂದವನ್ನು ಅನುಭವಿಸಿದನು. ಭಗವಂತನು ತನ್ನ ಹೃದಯಾಂತರಾಳದಲ್ಲಿ ತನ್ನ ಅಂತರಾತ್ಮನಾಗಿ ನೆಲೆಸಿರುವನು ಎಂಬುದನ್ನು ಅರಿತುಕೊಂಡು, ಅದೇ ಭಾವದಲ್ಲಿ ತನ್ಮಯನಾದನು. ಅನಂತರ ಅವನು ಆ ಸ್ಥಿತಿಯಿಂದ ಕೆಳಗಿಳಿದು ಬಂದು ಆಂತರಿಕ ಭಾವವನ್ನು ಹೊರಗಡೆ ವ್ಯಕ್ತಿಗಳಲ್ಲಿ ನೋಡಲು ಪ್ರಯತ್ನಿಸಿದನು. ಆದರೆ ಎಲ್ಲ ವಿಪರೀತ. ಯಾರೂ ಭಗವತ್ ಸೇವೆಯಲ್ಲಿ ನಿರತರಾಗಿಲ್ಲ , ಎಲ್ಲರೂ ಭೋಗಜೀವನದಲ್ಲಿಯೇ ನಿರತರು. ಆಗ ಅವನ ಮನಸ್ಸು ನಿರಾಶೆ ಮತ್ತು ದುಃಖದಿಂದ ತುಂಬಿಹೋಯಿತು. ಅವನು ಭಾವಿಸಿದ, ''ಇದೇನಿದು?... ಇದು ಭಗವಂತನ ಸಾನ್ನಿಧ್ಯ, ಇಲ್ಲಿ ಈ ಪ್ರಾಪಂಚಿಕ ವ್ಯವಹಾರ ವೇಕೆ? ಇಲ್ಲಿ ಬಂದು ಸಂಸಾರವನ್ನು ಮರೆತು ಭಗವಂತನನ್ನು ಚಿಂತಿಸುವುದನ್ನು ಬಿಟ್ಟು ಇಲ್ಲಿಯೂ ಸಂಸಾರವನ್ನು ತಂದು ತುಂಬಿಸಿದ್ದೀರಿ.'' ಹೀಗೆ ಯೋಚಿಸುತ್ತ ಅವನಿಗೆ ಕ್ರೋಧ ಉಕ್ಕಿ ಬಂತು. ಅವನು ಉಗ್ರರೂಪವನ್ನು ತಾಳಿ ಕೈಯಲ್ಲಿ ಬೆತ್ತವನ್ನು ಹಿಡಿದು ವ್ಯಾಪಾರಿಗಳನ್ನೂ, ಮತ್ತಿತರರನ್ನೂ ದೇವಸ್ಥಾನದಿಂದ ಹೊಡೆದು ಓಡಿಸಿದನು. ಅವರಿಗೂ ಅವನ ಮಾತಿನಿಂದ ಸ್ವಲ್ಪ ಹೊತ್ತಿನ ಮಟ್ಟಿಗೆ ತಿಳಿವಳಿಕೆ ಬಂದು, ತಮ್ಮ ತಪ್ಪಿನ ಅರಿವಾಗಿ ಎಲ್ಲರೂ ಅಲ್ಲಿಂದ ಕಾಲ್ಕಿತ್ತರು. ಯಾರಿಗೂ ಅವನನ್ನು ಪ್ರತಿಭಟಿ ಸುವ ಧೈರ್ಯವಿರಲಿಲ್ಲ. *('ಲೀಲಾ ಪ್ರಸಂಗ',* ಗುರುಭಾವ).

ಇದೇ ರೀತಿ ಒಮ್ಮೆ ಪರಮಹಂಸರು ರಾಖಾಲನಿಗೆ ಒಳ್ಳೆಯ ದಾಗಲಿ ಎಂದು ಶ್ರೀಸಿದ್ಧೇಶ್ವರೀದೇವಿಗೆ ಎಳನೀರು ಸಕ್ಕರೆ ಅರ್ಪಿ ಸಲು ಹರಕೆ ಹೊತ್ತಿದ್ದರು. ಅದರ ಸಲುವಾಗಿ ದೇವಿಯ ದೇವಾ ಲಯಕ್ಕೆ ಹೋದಾಗ ಕಂಡಿದ್ದೇನು? ಅಲ್ಲಿಯ ಅರ್ಚಕರು ತಮ್ಮ ಸ್ನೇಹಿತರೊಡನೆ ಇಸ್ಪೀಟು ಆಡುತ್ತಿದ್ದಾರೆ! ಇದನ್ನು ನೋಡಿ ಪರಮಹಂಸರು ಭಕ್ತರಿಗೆ ಹೇಳಿದರು: ''ನೋಡಿದಿರಾ, ಇಲ್ಲೂ ಇಸ್ಪೀಟು ಆಡುತ್ತಿರುವುದನ್ನು! ಇಲ್ಲಿ ಮಾಡಬೇಕಾದ್ದು ಭಗವ ಚ್ಚಿಂತನೆ.''

**೫) ಅಂತ್ಯಕಾಲದಲ್ಲಿ:** ಅವತಾರ ಪುರುಷರು ಜನ್ಮ ತಾಳುವುದು ಜೀವಿಗಳ ಉದ್ಧಾರಕ್ಕಾಗಿಯೇ ಎಂದು ಪ್ರತ್ಯೇಕವಾಗಿ ಹೇಳಬೇಕಾ ಗಿಲ್ಲ. ಏಕೆಂದರೆ ದೀನ-ಹೀನ-ಪಾಪಿಗಳ ಉದ್ಧಾರಕ್ಕಾಗಿಯೇ ತಮ್ಮ ಜೀವನವನ್ನು ಮುಡಿಪಾಗಿಸಿರುವ ಅವರನ್ನು ಪತಿತಪಾವಕ ರೆಂದು, ದೀನದಯಾಳುಗಳೆಂದು ವಿಧವಿಧವಾಗಿ ನಾವು ಸ್ತುತಿಸು ತ್ತೇವೆ. ಸಾಮಾನ್ಯರಂತೆ ಅವರಲ್ಲಿ ತಮ್ಮ ದೇಹರಕ್ಷಣೆಯ ಆಸೆ ಯಾಗಲಿ ಅಥವಾ ಮನಸ್ಸಿನಲ್ಲಿ ಸ್ವಾರ್ಥದ ಲವಲೇಶವಾಗಲಿ ಇರುವುದಿಲ್ಲ. ಇತರರ ಪಾಪಗ್ರಹಣದಿಂದಾಗಿಯೆ ಅವರಲ್ಲಿ ರೋಗ, ರುಜಿನಗಳು ಕಾಣಿಸಿಕೊಳ್ಳುತ್ತವೆ. ಈ ವಿಷಯವನ್ನು ಅವರು ತಿಳಿದಿದ್ದರೂ ಸಹಜೀವಿಗಳ ಮೇಲಿನ ಕಾರುಣ್ಯದಿಂದಾಗಿ ಅವರು ತಮ್ಮ ಶರೀರದ ಸುಖ-ಭೋಗಗಳನ್ನು ತ್ಯಜಿಸುತ್ತಾರೆ. ಶ್ರೀರಾಮಕೃಷ್ಣರ ಜೀವನದಲ್ಲಿಯೂ ಇದು ಅಕ್ಷರಶಃ ಸತ್ಯವಾಗಿರು ವುದನ್ನು ನಾವು ಕಾಣಬಹುದು. ಒಮ್ಮೆ ಶ್ಯಾಮಪುಕುರದಲ್ಲಿ ವಾಸಿಸುತ್ತಿರುವಾಗ ಅವರಿಗೆ ಒಂದು ಅದ್ಭುತ ದರ್ಶನವಾಯಿತು. ಆ ದರ್ಶನದಲ್ಲಿ ಜಗನ್ಮಾತೆಯು ಅವರಿಗೆ ತಮ್ಮ ರೋಗದ ಕಾರಣ ವನ್ನು ತಿಳಿಸಿದಳು. ''ಎಲ್ಲ ಬಗೆಯ ಪಾಪವನ್ನು ಮಾಡಿದ ಜನರು ಬಂದು ಮುಟ್ಟಿದಾಗ, ಅವರ ದುರ್ದೆಶೆಯನ್ನು ನೋಡಿ ಮನಸ್ಸಿ ನಲ್ಲಿ ದಯೆಯುಂಟಾದರೆ ಅವರ ದುಷ್ಕರ್ಮದ ಫಲವನ್ನೂ ಸ್ವೀಕರಿಸಬೇಕಾಗುವುದು. ಅವನ್ನೆಲ್ಲ ಸ್ವೀಕರಿಸಿಯೇ ಈ ರೀತಿ ಆಗಿದೆ. ಅದಕ್ಕಾಗಿಯೇ ಈ ಗಂಟಲು ಬೇನೆ ಉಂಟಾಗಿದೆ. ಇಲ್ಲ ದಿದ್ದರೆ ಈ ದೇಹದಲ್ಲಿ ಯಾವ ಕೆಟ್ಟದ್ದನ್ನೂ ಮಾಡಲಿಲ್ಲ- ಇಷ್ಟೊಂದು ಕಾಯಿಲೆ ಏಕೆ?'' ಎಂದು ಶ್ರೀರಾಮಕೃಷ್ಣರು ವಿವ ರಿಸುತ್ತಾರೆ. *('ಲೀಲಾಪ್ರಸಂಗ',* ಭಾವಮುಖದಲ್ಲಿ) ಜೀವಿಗಳ ಕಲ್ಯಾಣಕ್ಕಾಗಿ ಲಕ್ಷಾಂತರ ಬಾರಿ ಜನ್ಮವೆತ್ತಿ ದುಃಖವನ್ನು ಅನು ಭವಿಸುವುದಕ್ಕೆ ತಾನು ಸಿದ್ಧನಾಗಿದ್ದೇನೆ ಎಂದು ಅವರು ಅನೇಕ ಬಾರಿ ಹೇಳುತ್ತಿದ್ದರು.

ಕ್ರೈಸ್ತಧರ್ಮದಲ್ಲಿಯೂ ಈ ರೀತಿಯ ಘಟನೆಗಳ ಬಗ್ಗೆ ಉಲ್ಲೇಖವಿದೆ. ಏಸುಕ್ರಿಸ್ತನು ಇತರರ ಪಾಪವನ್ನು ತಾನು ಸ್ವೀಕ ರಿಸಿ ಅವರನ್ನು ಉದ್ಧರಿಸುತ್ತಾನೆ. ತನ್ನ ಶಿಷ್ಯನಾದ ಜುದಾಸನು ಧನಲೋಭದಿಂದ ತನ್ನನ್ನು ಶತ್ರುಗಳಿಗೆ ಒಪ್ಪಿಸುವನು ಮತ್ತು ಅದ ರಿಂದಲೇ ತನ್ನ ಜೀವನ ಅಂತ್ಯಗೊಳ್ಳುವುದು ಎಂದು ಮೊದಲೇ ತಿಳಿದಿದ್ದರೂ, ಅವನನ್ನು ಸಮಾನವಾಗಿಯೇ ಪ್ರೀತಿಸಿ ಅವನ ಶ್ರೇಯಸ್ಸನ್ನು ಬಯಸಿದನು. *('ಲೀಲಾ ಪ್ರಸಂಗ',* ವಾತ್ಸಲ್ಯ ಭಾವ ಸಾಧನೆ). ಮೇರಿ ಮತ್ತು ಮಾರ್ಥ ಎಂಬ ಸೋದರಿಯರು ಮತ್ತು

ಲ್ಯಾಸರಸ್ ಎಂಬ ಅವರ ಸೋದರ ಈ ಮೂವರೂ ಏಸುವಿನ ಶಿಷ್ಯರಾಗಿದ್ದರು. ಸೋದರ ಲ್ಯಾಸರಸ್ ತೀರಿಕೊಂಡಾಗ ಮೇರಿ ಏಸುವಿನ ಬಳಿಗೆ ಹೋಗಿ ಈ ವಿಷಯವನ್ನು ತಿಳಿಸಿ ಅಳಲಾರಂಭಿಸಿದಳು. ಆಕೆಯ ದುಃಖವನ್ನು ನೋಡಿ ಅವನೂ ಅಳತೊಡಗಿದ. ಕೊನೆಗೆ ಸಾಂತ್ವನ ಹೇಳುತ್ತಾ ಅವರ ಮೇಲಿನ ದಯೆಯಿಂದ ಪುನಃ ಲ್ಯಾಸರಸ್‌ನನ್ನು ಏಸು ಬದುಕಿಸಿದನು. ''ದುಃಖ ಶೋಕಗಳಿಂದ ಕೂಡಿದ ಭೂಮಿಯ ಮೇಲೆ ಪ್ರೇಮ ಸ್ವರೂಪ ಪರಮಪಿತನ ಪ್ರೇಮ ಸಾಮ್ರಾಜ್ಯವನ್ನು ಸ್ಥಾಪಿಸಲು ತನ್ನ ಪ್ರಾಣವನ್ನು ಆತ ಅರ್ಪಿಸಿದನು!'' *('ಲೀಲಾ ಪ್ರಸಂಗ',* ಗುರುಭಾವ).

**೬) ಸಂದೇಶಗಳಲ್ಲಿ:** ಮಾಸ್ಟರ್ ಮಹಾಶಯನು ಒಮ್ಮೆ ಶ್ರೀರಾಮಕೃಷ್ಣರಿಗೆ ಮಾರ್ಥ ಮತ್ತು ಮೇರಿಯ ಬಗ್ಗೆ ಹೇಳುವ ಸಂದರ್ಭದಲ್ಲಿ, ''ನಿಮಗೂ ಏಸುವಿಗೂ ಅನೇಕ ಸಾದೃಶ್ಯಗಳಿವೆ'' ಎಂದು ಹೇಳುತ್ತಾನೆ. ಆಗ ಅವರು ನಗುತ್ತಾ, ''ಏನೇನು ಸಾದೃಶ್ಯಗಳಪ್ಪ ಅವು!'' ಎಂದು ಹೇಳುತ್ತಾರೆ. ಅದಕ್ಕೆ ಮಾಸ್ಟರ್, ''ನೀವು ಭಕ್ತರಿಗೆ ಉಪವಾಸ ಮಾಡಬೇಕೆಂದಾಗಲಿ ಅಥವಾ ಕಠೋರ ಸಾಧನೆ ಮಾಡಬೇಕೆಂದಾಗಲಿ ಹೇಳುತ್ತಿಲ್ಲ. ಊಟೋಪಚಾರಗಳ ಸಂಬಂಧವಾಗಿ ಅಂಥ ಕಟ್ಟುನಿಟ್ಟಿನ ನಿಯಮಗಳನ್ನೇನೂ ನೀವು ಎಣಿಸುತ್ತಿಲ್ಲ. ಏಸುವಿನ ಶಿಷ್ಯರು ಶಾಸ್ತ್ರೋಲ್ಲಂಘನೆ ಮಾಡಿ ಭಾನುವಾರ ಊಟ ಮಾಡಿದರಂತೆ; ಅದಕ್ಕಾಗಿ ಕರ್ಮಠರು ಅವರನ್ನು ತರಾಟೆಗೆ ತೆಗೆದುಕೊಂಡರಂತೆ. ಆಗ ಏಸು ಹೇಳಿದನಂತೆ, ''ಅವರು ಉಂಡು ತಿಂದು ಆನಂದಪಡಲೇಬೇಕು. ಎಲ್ಲಿಯವರೆಗೆ ವರ ಜೊತೆಯಲ್ಲಿದ್ದಾನೋ, ಅಲ್ಲಿಯವರೆಗೆ ವರನ ಅನುಯಾಯಿಗಳು ಆನಂದಪಡಲೇಬೇಕು...'' ಅಂದರೆ, ಎಲ್ಲಿಯವರೆಗೆ ಅವತಾರ ಪುರುಷ ಜೊತೆಯಲ್ಲಿದ್ದಾನೊ, ಅಲ್ಲಿಯವರೆಗೆ ಆತನ ಸಾಂಗೋಪಾಂಗಿಗಳು ಆನಂದಪಟ್ಟೇ ತೀರಬೇಕು.

ಮತ್ತೊಂದು ಸಾಮ್ಯವನ್ನು ಹೇಳುತ್ತಾ, ''ನೀವು ಹೇಳುತ್ತೀರಲ್ಲ, 'ಹುಡುಗರ ಹೃದಯವನ್ನು ಕಾಮಕಾಂಚನ ಇನ್ನೂ ಹೊಕ್ಕಿಲ್ಲ ; ಅವರು ಉಪದೇಶವನ್ನು ಗ್ರಹಿಸಬಲ್ಲರು. ಅದು ಹೊಸ ಮಡಕೆಯಲ್ಲಿ ಹಾಲು ಹಾಕಿಡಬಹುದಲ್ಲ ಹಾಗೆ; ಮೊಸರಿನ ಮಡಕೆಯಲ್ಲಿ ಹಾಕಿಟ್ಟರೆ ಅದು ಕೆಟ್ಟು ಹೋಗುವ ಸಂಭವ' ಅಂತ; ಆತನೂ ಇದೇ ರೀತಿಯಾಗಿ ಹೇಳುತ್ತಿದ್ದ – 'ಹಳೆ ಸೀಸೆಯಲ್ಲಿ ಹೊಸ ಮದ್ಯ ಹಾಕಿಟ್ಟರೆ ಅದು ಒಡೆದುಬಿಡುವ ಸಂಭವ. ಹಳೆ ಬಟ್ಟೆಗೆ ಹೊಸ ಬಟ್ಟೆ ತೇಪೆ ಹಾಕಿದರೆ ಹಳೇದು ಬೇಗ ಹರಿದು ಹೋಗಿಬಿಡುತ್ತದೆ..' ಅಂತ.'' ಮುಂದುವರಿಸುತ್ತಾ ಮಾಸ್ಟರ್ ಇನ್ನೊಂದು ಸಾಮ್ಯವನ್ನು ಹೇಳುತ್ತಾನೆ: ''ಮತ್ತೆ ನೀವು ಹೇಳುತ್ತೀರಲ್ಲ, 'ನೀವು ಮತ್ತು ತಾಯಿ ಒಂದೇ' ಅಂತ. ಹಾಗೆಯೇ ಏಸು ಕೂಡ ಹೇಳುತ್ತಿದ್ದ 'ನಾನು ಮತ್ತು ನನ್ನ ತಂದೆ ಒಂದೇ' ಎಂದು... ನೀವು ಹೇಳುತ್ತೀರಿ, 'ವ್ಯಾಕುಲರಾಗಿ ಆತನನ್ನು ಕರೆದರೆ ಆತ ಆಲಿಸಿಯೇ ಆಲಿಸುತ್ತಾನೆ' ಅಂತ. ಹಾಗೆಯೇ ಏಸು ಹೇಳುತ್ತಿದ್ದ, 'ವ್ಯಾಕುಲನಾಗಿ ಬಾಗಿಲನ್ನು ತಟ್ಟಿ, ಆಗ ಅದು ತೆರೆದು ನಿಲ್ಲುತ್ತದೆ' ಅಂತ.'' *(ಶ್ರೀರಾಮಕೃಷ್ಣ ವಚನವೇದ, ಸಂಪುಟ.೨, ಪು.೪೨೪)*

ಭಗವದ್ಭಾವವನ್ನು ಭಕ್ತಿಯಿಂದ ಮೊದಲೇ ಹೃದಯದಲ್ಲಿ ಪೋಷಿಸಿಕೊಂಡು ಬರದಿದ್ದರೆ ತೀರ್ಥಸ್ಥಳಗಳಿಗೆ ಹೋದರೂ ವಿಶೇಷ ಪ್ರಯೋಜನವಾಗದು ಎಂದು ಶ್ರೀರಾಮಕೃಷ್ಣರು ಹೇಳುತ್ತಿದ್ದರು. ಅವರ ಶಿಷ್ಯರು ತೀರ್ಥಸ್ಥಾನಗಳಿಗೆ ಹೋಗುವ ಆಸೆಯನ್ನು ವ್ಯಕ್ತಪಡಿಸಲು ಅವರು ಹೀಗೆ ಹೇಳುತ್ತಿದ್ದರು, ''ನೋಡಪ್ಪ, ಯಾರಿಗೆ ಇಲ್ಲಿದೆಯೋ ಅವರಿಗೆ ಅಲ್ಲಿದೆ, ಯಾರಿಗೆ ಇಲ್ಲಿಲ್ಲವೋ ಅವರಿಗೆ ಅಲ್ಲೂ ಇಲ್ಲ...ಯಾರ ಹೃದಯದಲ್ಲಿ ಭಕ್ತಿಭಾವವಿರುತ್ತದೊ ಅದು ಇನ್ನೂ ವೃದ್ಧಿಯಾಗುವುದು. ಯಾರ ಹೃದಯದಲ್ಲಿ ಆ ಭಾವವಿಲ್ಲವೊ ಅವರಿಗೆ ಏನು ಪ್ರಯೋಜನವಾದೀತು?...'' ಏಸುಕ್ರಿಸ್ತನು ಒಮ್ಮೆ ತನ್ನ ಶಿಷ್ಯರಿಗೆ ಹೀಗೆ ಹೇಳಿದನು: ''To him who hath more shall be given and from him who hath little that little shall be taken away.''

ಅಂದರೆ ಯಾರಲ್ಲಿ ಅಧಿಕ ಭಕ್ತಿ ವಿಶ್ವಾಸವಿದೆಯೊ ಅದು ಇನ್ನೂ ವೃದ್ಧಿಸುವುದು. ಯಾರಲ್ಲಿ ಅತ್ಯಲ್ಪ ಭಕ್ತಿ-ವಿಶ್ವಾಸವಿರುತ್ತದೆಯೊ ಅದೂ ಕೂಡ ಕಿತ್ತುಕೊಳ್ಳಲ್ಪಡುವುದು. *('ಶ್ರೀರಾಮಕೃಷ್ಣ ಲೀಲಾ ಪ್ರಸಂಗ'* ದಿಂದ)

ಮಾಸ್ಟರ್ ಮಹಾಶಯ ಶ್ರೀರಾಮಕೃಷ್ಣರ ಬಗ್ಗೆ ಈ ರೀತಿ ಹೇಳುತ್ತಾನೆ. ''ಪರಮಹಂಸರಲ್ಲಿ ನಾವು ಎಲ್ಲ ವಿಧದ ಭಾವಗಳನ್ನೂ ನೋಡಬಹುದು. ಎಲ್ಲಾ ಧರ್ಮಗಳ, ಎಲ್ಲಾ ಸಂಪ್ರದಾಯಗಳ ಜನರು ಅವರೊಡನೆ ಬೆರೆತು ಆನಂದ ಮತ್ತು ಶಾಂತಿಯನ್ನು ಪಡೆಯುತ್ತಿದ್ದಾರೆ. ಅವರ ಭಾವಗಳು ಏನೇನು, ಅವು ಎಷ್ಟು ಗಂಭೀರವಾದವು ಎಂಬವುಗಳ ಸಂಬಂಧವಾಗಿ ಯಾರು ತಾನೆ ಅವರ ಆಂತರ್ಯವನ್ನು ಒಳಹೊಕ್ಕು ನೋಡಬಲ್ಲರು?'' ಏಸುವಿನಂತಾಗದೆ ಏಸುವಿನ ಎಲ್ಲಾ ಭಾವಗಳನ್ನು ಅರಿಯಲಾಗುವುದಿಲ್ಲ. ಪರಮಹಂಸರ ಈ ಗಂಭೀರ ಭಾವ, ಏಸು ಹೇಳಿದ್ದಾನಲ್ಲ, ''ಸ್ವರ್ಗದಲ್ಲಿರುವ ನಿಮ್ಮ ತಂದೆ ಪೂರ್ಣನಾಗಿರುವ ರೀತಿಯಲ್ಲಿ ನೀನೂ ಪೂರ್ಣನಾಗು'' ಅಂತ, ಅದೇ ರೀತಿಯಿಂದ ಬಹುಶಃ ಆಗಿರಬೇಕು. *('ಶ್ರೀರಾಮಕೃಷ್ಣ ವಚನವೇದ', ಸಂ.೨, ಪು. ೪೯೮.)*

ಎಲ್ಲಾ ಅವತಾರಗಳಲ್ಲಿಯೂ ಶ್ರೀರಾಮಕೃಷ್ಣರ ವಿಶೇಷತೆ ಎಂದರೆ ಅವರು ಸರ್ವಧರ್ಮಗಳ ಸಮನ್ವಯವನ್ನು ಪ್ರತಿಪಾದಿಸಿದ್ದು ಮತ್ತು **'ಎಷ್ಟು ಮತಗಳಿವೆಯೊ ಅಷ್ಟು ಪಥಗಳಿವೆ'** ಎನ್ನುವ ಸತ್ಯವನ್ನು ಉಜ್ವಲಗೊಳಿಸಿದುದು. ಆದ್ದರಿಂದಲೇ ಈಗ ಅವರನ್ನು ಸರ್ವಧರ್ಮ ಸ್ಥಾಪಕರೆಂದು, ಅವತಾರವರಿಷ್ಠರೆಂದು ವಿಶ್ವವು ಶ್ರದ್ಧೆ, ವಿಶ್ವಾಸ, ಭಕ್ತಿಗಳಿಂದ ಆರಾಧಿಸುತ್ತಿದೆ.



ಸಂತರ ಜೀವನ

# ತಾಯಿಯ ಸೇವೆಯಲ್ಲಿ ದೇವರನ್ನು ಕಂಡ ಸಂತ ಬಯಾಜಿದ್

ಸ್ವಾಮಿ ವೀರೇಶಾನಂದ

ಬಯಾಜಿದ್ ಅತ್ಯಂತ ಸರಳ ಸಂತ. ಅವನ ಜೀವನದ ಮಾಧುರ್ಯ ಅಪೂರ್ವ. ಹಾಗೆಂದೇ ಸೂಫೀ ಸಂತರ ಮಧ್ಯೆ ಅವನು 'ಸಂತರ ರತ್ನ'ವಾಗಿದ್ದಾನೆ.

ಬಯಾಜಿದ್ ಒಬ್ಬ ಬಡವ. ಅವನ ತಂದೆ ಬಾಲ್ಯದಲ್ಲಿಯೇ ಮರಣ ಹೊಂದಿದ. ತಾಯಿ ಕಷ್ಟಪಟ್ಟು ಅವನನ್ನು ಬೆಳೆಸಿದಳು. ಬಹಳ ತ್ಯಾಗ ಮಾಡಿ, ಕಷ್ಟಪಟ್ಟು ದುಡಿದು ಮಗನನ್ನು ದೊಡ್ಡವನನ್ನಾಗಿ ಮಾಡಿದಳು. ಕೊರಾನ್ ಕಲಿಯಲೆಂದು ಶಾಲೆಗೆ ಕಳುಹಿಸಿದಳು. ಬಯಾಜಿದ್ ಬುದ್ಧಿವಂತ ಹುಡುಗ. ಶಿಕ್ಷಕರ ಪ್ರೀತಿಪಾತ್ರ ವಿದ್ಯಾರ್ಥಿ. ಗುರುಗಳ ಕೊರಾನ್ ವಿವರಣೆಯನ್ನು ಮನಸ್ಸಿಟ್ಟು ಕೇಳುತ್ತಿದ್ದನು. ಒಮ್ಮೆ ಕೊರಾನಿನ ಒಂದು ಸಣ್ಣ ವಾಕ್ಯ ಅವನ ಗಮನವನ್ನು ಸೆಳೆಯಿತು; ಹೃದಯವನ್ನು ಮಿಡಿಯಿತು. 'ದೇವರ ಸೇವೆ ಮಾಡು; ತಾಯಿಯ ಸೇವೆ ಮಾಡು' ಎನ್ನುವುದೇ ಆ ಉಕ್ತಿ. ಇದನ್ನು ಓದಿ ಬಯಾಜಿದನ ಮನಸ್ಸಿನಲ್ಲಿ ಸಂಶಯ ಮೂಡಿತು. ಗುರುಗಳು ಕೊಟ್ಟ ವಿವರಣೆ ಅವನನ್ನು ತೃಪ್ತಿಪಡಿಸಲಿಲ್ಲ. ಶಿಕ್ಷಕರು ಮುಂದಿನ ಭಾಗಕ್ಕೆ ಮುಂದುವರಿದರು. ಆದರೆ ಬಯಾಜಿದನಿಗೆ ಮುಂದುವರೆಸಲು ಸಾಧ್ಯವಾಗಲಿಲ್ಲ. ಅವನು ಈ ಉಕ್ತಿಯಲ್ಲೇ ತನ್ನ ಮನಸ್ಸನ್ನು ತೊಡಗಿಸಿ, ಅದರಲ್ಲೇ ತನ್ಮಯನಾಗಿಬಿಟ್ಟನು. ಹಠಾತ್ತನೆ ಎದ್ದು, ಗುರುಗಳ ಒಪ್ಪಿಗೆ ಪಡೆದು ಮನೆಗೆ ಹೋದನು. ಅದನ್ನು ಕುರಿತು ತಾಯಿಯನ್ನು ಕೇಳಿದನು. ತಾಯಿ ಕೊಟ್ಟ ವಿವರಣೆಯೂ ಅವನಿಗೆ ತೃಪ್ತಿ ನೀಡಲಿಲ್ಲ. ಕಡೆಗೆ ತನ್ನ ಮನಸ್ಸಿನ ಭಾವನೆಯನ್ನು ತಾಯಿಯಲ್ಲಿ ತೋಡಿಕೊಂಡನು: ''ನನಗೆ ಭಗವಂತನ ಸೇವೆ ಮಾಡಬೇಕು ಎಂಬ ಇಚ್ಛೆಯಿದೆ. ಸಂಪೂರ್ಣವಾಗಿ ಅವನ ಸೇವೆ ಮಾಡಬೇಕು ಎಂಬ ತವಕ ನನ್ನದು. ಆದರೆ ತಾಯಿಯ ಸೇವೆ ಮಾಡಬೇಕೆಂದು ಕೂಡ ಕೊರಾನ್ ಹೇಳುತ್ತದೆ. ಈ ಎರಡೂ ಮಾರ್ಗಗಳನ್ನು ನಾನು ಒಮ್ಮೆಲೇ ಕ್ರಮಿಸಲಾರೆ. ಅಮ್ಮಾ, ನಿನ್ನ ನಿರ್ಧಾರವೇನು? ನಾನು ನಿನ್ನ ಜೊತೆಯಲ್ಲೇ ಇದ್ದು ನಿನ್ನ ಸೇವೆ ಮಾಡಬೇಕೇ ಅಥವಾ ಭಗವಂತನ ಸೇವೆಯಲ್ಲಿ ಪೂರ್ತಿಯಾಗಿ ತೊಡಗಿಸಿಕೊಳ್ಳಬೇಕೆ?'' ಅವನ ತಾಯಿ ಮಹಾನ್ ಭಕ್ತಳು. ಅಲ್ಲಾಹುವಿನಲ್ಲಿ ಅವಳಿಗೆ ಪರಮಪ್ರೀತಿ. ಅವಳು ಹೇಳಿದಳು, ''ಬಯಾಜಿದ್, ನಿನ್ನನ್ನು ನಾನು ಭಗವಂತನಾದ ಅಲ್ಲಾಹುವಿಗೆ ಕೊಟ್ಟುಬಿಡುತ್ತೇನೆ. ನಿನ್ನ ಮೇಲಿನ ನನ್ನ ಅಧಿಕಾರವನ್ನು ಹಿಂತೆಗೆದುಕೊಳ್ಳುತ್ತೇನೆ. ಮಗೂ, ನೀನು ಭಗವಂತನ ಸೇವೆಯನ್ನೇ ಮಾಡು. ಅದರಲ್ಲಿಯೇ ನಿನ್ನ ಜೀವನದ ಸಾರ್ಥಕತೆಯನ್ನು ಕಂಡುಕೋ.''

## ಗುರು ಸಾನ್ನಿಧ್ಯದಲ್ಲಿ

ಭಗವಂತನಲ್ಲಿ ಸಂಪೂರ್ಣ ಶರಣಾಗತನಾದ ಬಯಾಜಿದ್ ಆ ಕ್ಷಣವೇ ಮನೆಯನ್ನು ಬಿಟ್ಟು ತೆರಳಿದನು. ಊರು ಬಿಟ್ಟು ನಡೆದನು, ತಂದೆ-ತಾಯಿಗಳನ್ನು ಮರೆತುಬಿಟ್ಟನು. ಅಂದಿನಿಂದ ಅವನು ಭಗವಂತನಿಗೆ ಸೇರಿದವನಾದನು. ದೇವರ ಸೇವೆ ಮಾಡಬೇಕು, ದೇವರನ್ನು ಕಾಣಬೇಕು - ಇವೆರಡೇ ಅವನ ಬಾಳಿನ ಉದ್ದೇಶಗಳಾದವು. ಅವನು ಊರಿಂದೂರಿಗೆ ಹೋದ, ಅನೇಕ ಮಹಾತ್ಮರನ್ನು ಸಂಧಿಸಿದ. ಅವರ ಉಪದೇಶಗಳನ್ನು ಆಲಿಸಿದನು. ಸುಮಾರು ಮೂವತ್ತು ವರ್ಷಗಳ ಕಾಲ ಕಠಿಣ ತಪಸ್ಸುಗಳನ್ನು ಆಚರಿಸಿದನು. ಅವನೇ ಒಬ್ಬ ಮಹಾತ್ಮನಾಗಿಬಿಟ್ಟನು. ಭಗವಂತನ ವಿರಹ, ಕಾತರತೆಯನ್ನು ಬಯಾಜಿದ್ ಉತ್ಕಟವಾಗಿ ಅನುಭವಿಸಿದನು. ಭಗವಂತನು ಪರಿಪೂರ್ಣವಾಗಿ ಪ್ರಕಾಶಗೊಳ್ಳುವ 'ರಹಸ್ಯ ದ್ವಾರ'ವು ತನ್ನಲ್ಲಿ ಅನಾವರಣಗೊಳ್ಳಲಿ ಎಂದು ಅವನು ತವಕಿಸಿದನು. ಈ ಪರಿಸ್ಥಿತಿಯಲ್ಲಿ ಪ್ರವಾದಿ ಮುಹಮ್ಮದರ ಮರಿಮಗನಾಗಿದ್ದ ಸಂತ ಜಾಫರ್ ಸಾ ಇ ಸಾದಿಕ್ ಎಂಬ ಮಹಾತ್ಮರನ್ನು ಸಂಧಿಸಿದನು. ಅವರು ಅರೇಬಿಯಾ ದೇಶದಲ್ಲಿಯೇ ಇಸ್ಲಾಂ ತತ್ತ್ವಶಾಸ್ತ್ರದಲ್ಲಿ ಅದ್ವಿತೀಯ ಪಾಂಡಿತ್ಯವನ್ನು ಪಡೆದವರು. ಕೊರಾನಿಗೆ ವಿವರಣೆಯನ್ನು ನೀಡುವುದರಲ್ಲಿ ಅವರನ್ನು ಮೀರಿಸುವವರು ಯಾರೂ ಇರಲಿಲ್ಲ. ಆದರೆ ಆಗ ಆಳುತ್ತಿದ್ದ ದೊರೆ ಖಲೀಫ ಅವರನ್ನು ಸದಾ ಕಾಡುತ್ತಿದ್ದ. ಅವರನ್ನು ಕೊಲ್ಲಲು ಅನೇಕ ಸಂಚುಗಳನ್ನು ಮಾಡಿದ್ದ. ಅವರ ಉಪದೇಶಗಳು ತನ್ನ ಅಧಿಕಾರವನ್ನು ಮೊಟಕು ಮಾಡಬಹುದೆಂದು ಖಲೀಫ ಭಾವಿಸಿದ್ದ.

ಈ ಮಹಾತ್ಮರ ಬಳಿಗೆ ಬಯಾಜಿದ್ ಹೋದನು. ಅವರಲ್ಲಿ ಅವನು ಪರಿಪೂರ್ಣ ಗುರುಗಳನ್ನು ಕಂಡನು. ಅವರ ಸಾನ್ನಿಧ್ಯದಲ್ಲಿ ಪರಮಾನಂದವನ್ನು ಹೊಂದಿದನು. ಸದಾ ಅವನು ಭಗವಚ್ಚಿಂತನೆಯಲ್ಲಿ ನಿರತನಾದನು. ಆ ಜಾಫರ್ ಸಾದಿಕ್ ಅವರು ಮಹಾನ್ ಪಂಡಿತರು, ಬರಹಗಾರರು. ಹಲವಾರು ಪುಸ್ತಕಗಳು ಅವರ ಹತ್ತಿರ ಇದ್ದವು. ಒಮ್ಮೆ ಬಯಾಜಿದ್‌ಗೆ ಅವರು ಪುಸ್ತಕವೊಂದನ್ನು ಕಪಾಟಿನಿಂದ ತರುವಂತೆ ಹೇಳಿದರು. ಬಯಾಜಿದ್ ಅಲ್ಲಿದ್ದು ಹಲವು ವರ್ಷಗಳಾಗಿದ್ದರೂ, ಅವನು ಪುಸ್ತಕಗಳಿರುವ ಕಪಾಟುಗಳನ್ನೇ ನೋಡಿರಲಿಲ್ಲ. ಮಹಾತ್ಮರು ಬಯಾಜಿದನಿಗೆ, ''ಬಯಾಜಿದ್, ನೀನು ಇಷ್ಟೊಂದು ಕಾಲ ಇಲ್ಲಿದ್ದರೂ, ಪುಸ್ತಕಗಳು ಇರುವ ಕಪಾಟನ್ನೇ ನೋಡಿಲ್ಲವೆ? ಇದೆಂಥ ಆಶ್ಚರ್ಯ!'' ಎಂದರು.ಇದಕ್ಕೆ ಬಯಾಜಿದ್, ''ಗುರುವೇ, ಪುಸ್ತಕಗಳ ಕಪಾಟು

ಗಳನ್ನು ನೋಡುವುದರಿಂದ ಆಗುವ ಪ್ರಯೋಜನವಾದರೂ ಏನು? ನಾನು ನಿಮ್ಮ ಮುಖವನ್ನು ನೋಡುತ್ತ ಇರುತ್ತೇನೆ. ನಿಮ್ಮ ಮಾತುಗಳನ್ನು ಕೇಳುತ್ತ ಇರುತ್ತೇನೆ. ಅವೇ ನನ್ನ ಜೀವನಕ್ಕೆ ಬೇಕಾದಷ್ಟು.'' ಎಂದು ಉತ್ತರವಿತ್ತನು. ಇದನ್ನು ಕೇಳಿದ ಗುರುಗಳು ಶಿಷ್ಯನ ಮಾನಸಿಕ ಸ್ಥಿತಿಯನ್ನು ಕುರಿತು ಗಹನವಾಗಿ ಆಲೋಚಿಸಿದರು. ತಮ್ಮ ಶಿಷ್ಯನ ತನ್ಮಯತೆಯನ್ನು ಮತ್ತು ಏಕಾಗ್ರತೆಯನ್ನು ಕಂಡು ಆನಂದಪಟ್ಟರು. ಅನಂತರ ಅವರು ಶಿಷ್ಯನನ್ನು ಕರೆದು, ''ಮಗೂ ಬಯಾಜಿದ್, ನಿನ್ನ ಸಾಧನೆ ಇಲ್ಲಿಗೆ ಸಂಪೂರ್ಣವಾಯಿತು. ನನ್ನನ್ನು ನೀನು ಬಿಟ್ಟು ತೆರಳಬೇಕು; ನಿನ್ನ ತಾಯಿಯಿದ್ದಲ್ಲಿ ಹೋಗಬೇಕು. ಅಲ್ಲಿದೆ ನಿನ್ನ ಮುಂದಿನ ಸಾಧನೆ. ನೀನು ಪಡೆದುಕೊಂಡ ಜ್ಞಾನ ನಿನ್ನ ಅಂತಿಮ ಧ್ಯೇಯವನ್ನು ತಲುಪಲು ನಿನಗೆ ಸಹಾಯ ಮಾಡಲಿ.'' ಹೀಗೆ ಆಶೀರ್ವಾದ ಮಾಡಿದ ಗುರು, ಬಯಾಜಿದನನ್ನು ತನ್ನ ತಾಯಿಯ ಬಳಿಗೆ ಕಳಿಸಿಕೊಟ್ಟನು.

### ತಾಯಿಯ ಸೇವೆಯೇ ಭಗವಂತನ ಸೇವೆ

ಬಯಾಜಿದನ ಜೀವನದ ಪ್ರತಿಯೊಂದು ಘಟನೆಯೂ ಅದ್ಭುತವೇ ಆಗಿದೆ. ಅವನು ತನ್ನ ತಾಯಿಯ ಮನೆಗೆ ಹೋದನು. ಆದರೆ ಬಾಗಿಲಿನ ಬಳಿಯಲ್ಲಿಯೇ ನಿಂತನು. ಒಳಗಡೆ ತಾಯಿ ಯಾರೊಡನೆಯೋ ಮಾತನಾಡುತ್ತಿದ್ದಳು. ಭಗವಂತನೊಡನೆ ಗಟ್ಟಿಯಾಗಿ ಅಳುತ್ತ ಸಂಭಾಷಣೆ ನಡೆಸುತ್ತಿದ್ದಳು. ಅವಳ ಪ್ರಾರ್ಥನೆ ಅವನಿಗೆ ಕೇಳಿಸುತ್ತಿತ್ತು. ಮಾತಿನ ಮಧ್ಯೆ ಆಕೆಯ ಆರ್ತನಾದ, ಅಳು – ಈ ಶಬ್ದವನ್ನೂ ಆಲಿಸಬಹುದಾಗಿತ್ತು. ''ಓ ಪ್ರಭುವೇ, ನಿನ್ನ ಆಶೀರ್ವಾದಗಳನ್ನು ನನ್ನ ಮಗನಾದ ಬಯಾಜಿದನ ಮೇಲೆ ಸದಾ ಹರಿಸುತ್ತಿರು. ಅವನ ಗುರುಗಳು ಮತ್ತು ಎಲ್ಲ ಮಹಾತ್ಮರು ಅವನಲ್ಲಿ ಸುಪ್ರೀತರಾಗಿರಲಿ. ತನ್ನ ಮಗನು ಪವಿತ್ರ ಜೀವನವನ್ನು ನಡೆಸಿ, ಅವರ ಸೇವೆಯನ್ನು ಮನಃಪೂರ್ವಕವಾಗಿ ಯಾವತ್ತೂ ಮಾಡುತ್ತಿರಲಿ.'' ತಾಯಿಯ ಈ ಕರುಣಾಕ್ರಾಂತ ಪ್ರಾರ್ಥನೆಯನ್ನು ಆಲಿಸಿದ ಬಯಾಜಿದ್ ನೀರವವಾಗಿ ಕಣ್ಣೀರು ಹರಿಸಿದನು. ಮನೆಯ ಒಳಗೆ ನಡೆದು, ''ಅಮ್ಮಾ, ಇದೋ ನಿನ್ನ ಮಗ ಬಯಾಜಿದ್ ಬಂದಿದ್ದೇನೆ'' ಎಂದು ಕೂಗಿ ಹೇಳಿದನು. ಮಗನ ಸಲುವಾಗಿ ಮೂವತ್ತು ವರ್ಷಗಳ ಕಾಲ ಸತತವಾಗಿ ಪ್ರಾರ್ಥನೆ ಮಾಡಿ, ಅತ್ತೂ ಅತ್ತೂ ತಾಯಿಯ ಕಣ್ಣುಗಳು ಸವೆದುಹೋಗಿದ್ದವು; ದೃಷ್ಟಿಯು ಕುಂದಿಹೋಗಿತ್ತು. ತಾಯಿಯು ಮಗನನ್ನು ಆದರದಿಂದ ಅಪ್ಪಿಕೊಂಡಳು. ''ಮಗೂ, ಮೂವತ್ತು ವರ್ಷಗಳ ಸುದೀರ್ಘಕಾಲದ ನಂತರ ನೀನು ನನ್ನ ನೆನಪು ಮಾಡಿಕೊಂಡೆಯಲ್ಲಪ್ಪಾ. ನೀನಿಲ್ಲದಾಗ, ನಿನಗಾಗಿ ಅದೆಷ್ಟು ನಾನು ಅತ್ತು ಕರೆದಿದ್ದೇನೆ, ಗೊತ್ತೇನು? ಹೀಗಾಗಿ ಕಣ್ಣಿನ ದೃಷ್ಟಿಯೇ ಹೊರಟುಹೋಗಿಬಿಟ್ಟಿತು.'' ಬಯಾಜಿದ್ ಉತ್ತರಿಸಿದನು, ''ಅಮ್ಮಾ, ನಾನು ಕಷ್ಟಸಾಧ್ಯವಾದ ಜ್ಞಾನವನ್ನು ಗಳಿಸಿಕೊಂಡಿದ್ದೇನೆ. ನಿನ್ನನ್ನು ಬಿಟ್ಟು ಹೋಗುವಾಗ, ಕೊರಾನಿನ ಎರಡು ಉಪದೇಶಗಳು ನನ್ನ ಮನಸ್ಸಿನಲ್ಲಿ ಇದ್ದವು. ನಾನು ಗುರುಗಳ ಸೇವೆಯ ಮಾರ್ಗವನ್ನು ಆರಿಸಿಕೊಂಡೆ. ತಾಯಿಯ ಸೇವೆಯನ್ನು ಕಡೆಗಣಿಸಿದೆ. ಈಗ ನಾನು ಈ ಉಪದೇಶದ ರಹಸ್ಯವನ್ನು ಅರಿತುಕೊಂಡಿದ್ದೇನೆ. ಬಹುಕಾಲದ ತಪಸ್ಸಿನಿಂದ, ಕಠಿಣ ಪರಿಶ್ರಮದಿಂದ ಯಾವುದನ್ನು ಅರಿತುಕೊಳ್ಳಬಹುದೋ ಅದನ್ನು ನಾನು ತಾಯಿಯಾದ ನಿನ್ನ ಸೇವೆಯಿಂದಲೇ ಪಡೆದುಕೊಳ್ಳಬಹುದು ಎಂಬುದನ್ನು ಈಗ ಅರಿತುಕೊಂಡೆ. ಇಂದಿನಿಂದ, ಓ ನನ್ನ ಪ್ರೀತಿಯ ತಾಯಿಯೇ, ನಿನ್ನನ್ನು ಬಿಟ್ಟು ನಾನು ಎಲ್ಲಿಗೂ ಹೋಗುವುದಿಲ್ಲ. ನಿನ್ನ ಸೇವೆಯನ್ನು ಮಾಡುತ್ತಲೇ ಜೀವನವನ್ನು ಸವೆಸುತ್ತೇನೆ.''

ಬಯಾಜಿದನ ಪಾಲಿಗೆ ಇದೊಂದು ಬಹು ಮುಖ್ಯವಾದ ಆಧ್ಯಾತ್ಮಿಕ ಅನ್ವೇಷಣೆಯಾಗಿತ್ತು. ಜಗನ್ಮಾತೆಯ ಆರಾಧನೆಯನ್ನು ತಾಯಿಯ ಸೇವೆಯ ರೂಪದಲ್ಲಿ ಮಾಡುವ ಅಪೂರ್ವ ಅವಕಾಶ ಅವನಿಗೆ ಲಭ್ಯವಾಗಿತ್ತು. ಅವನಿಗೆ ಅದೇ ಸಾಧನೆಯ ಪರಾಕಾಷ್ಠೆಯಾಗಿ ಪರಿಣಮಿಸಿತು. ಬಯಾಜಿದನು ತನ್ನ ತಾಯಿಯ ಸೇವೆಯನ್ನು ಬಹಳ ಭಕ್ತಿಪೂರ್ವಕವಾಗಿ ಮಾಡುತ್ತಿದ್ದನು. ಒಂದು ಸರಿರಾತ್ರಿಯಂದು ತಾಯಿ ಕುಡಿಯಲು ನೀರು ಬೇಕೆಂದು ಕೇಳಿದಳು. ಮನೆಯಲ್ಲಿ ನೀರು ಸ್ವಲ್ಪವೂ ಇರಲಿಲ್ಲ. ಭಾರವಾದ ಕಂಚಿನ ಪಾತ್ರೆಯನ್ನು ಎತ್ತಿಕೊಂಡು, ಹತ್ತಿರದಲ್ಲಿಯೇ ಹರಿಯುತ್ತಿದ್ದ ತೊರೆಯ ಹತ್ತಿರ ಓಡಿಹೋದನು. ನೀರು ತುಂಬಿಸಿಕೊಂಡು ಮನೆಗೆ ಬಂದಾಗ, ತಾಯಿ ಬಸವಳಿದು ನಿದ್ದೆ ಹೋಗಿದ್ದಳು. ಪಾತ್ರೆಯನ್ನು ನೆಲದಲ್ಲಿ ಇಡುವಾಗ ಶಬ್ದವಾಗುತ್ತದೆ ಎಂದು ಬಯಾಜಿದನು ಅದನ್ನು ಹೊತ್ತುಕೊಂಡೇ ನಿಂತನು. ತಾಯಿ ಹಾಯಾಗಿ ಮಲಗಿ ನಿದ್ದೆ ಮಾಡಿ, ಬೆಳಗಿನ ಜಾವ ಏಳುವ ತನಕವೂ ಹಾಗೆಯೇ ಹೊತ್ತುಕೊಂಡಿದ್ದನು.

ಹೀಗೆ ಬಯಾಜಿದನ ಸಾಧನೆಯಲ್ಲಿ ಒಂದು ನೂತನ ತಿರುವು ಕಾಣಿಸಿಕೊಂಡಿತು. ತಾಯಿಯ ಆರೈಕೆಯೇ ಮಹಾನ್ ಆಧ್ಯಾತ್ಮಿಕ ಸಾಧನೆಯಾಯಿತು. ಇದಕ್ಕಾಗಿಯೇ ಅವನ ಗುರುವು ಬಯಾಜಿದನನ್ನು ಪುನಃ ಮನೆಗೆ ಕಳಿಸಿದ್ದನು. ಗುರುವಿನ ಆಶಯ ಈ ಮೂಲಕ ಪೂರ್ತಿಯಾಯಿತು.

### ಅಪೂರ್ವ ಸಾಧನೆ

ತಾಯಿಯ ಅವಸಾನದ ನಂತರ, ಬಯಾಜಿದ್ ಮೆಕ್ಕಾಗೆ ತೀರ್ಥಯಾತ್ರೆ ಹೋದನು. ಅತ್ಯಂತ ಶ್ರದ್ಧೆ ಮತ್ತು ಭಕ್ತಿಯಿಂದ ಯಾತ್ರೆಯನ್ನು ಮಾಡಿದನು. 'ಭಗವಂತನ ಧಾಮ'ಕ್ಕೆ ಹೋಗುತ್ತಿದ್ದೇನೆ ಎನ್ನುವ ತುಂಬು ಗೌರವಭಾವದಿಂದ ಒಂದೊಂದು ಹೆಜ್ಜೆಯನ್ನೂ ಹಾಕುತ್ತಿದ್ದನು. ದಾರಿಯುದ್ದಕ್ಕೂ ಅನೇಕ ರೀತಿಯ ತಪಸ್ಸನ್ನು ಆಚರಿಸಿದನು. ಹೀಗಾಗಿ ಮೆಕ್ಕಾಗೆ ಹೋಗಲು ಅವನಿಗೆ ಹನ್ನೆರಡು ವರ್ಷಗಳ ಕಾಲ ಬೇಕಾಯಿತು. ಮುಸ್ಲಿಂ ಕಟ್ಟುಪಾಡಿನ ಪ್ರಕಾರ ಅವನು ಮದೀನಾ ನಗರದ ಯಾತ್ರೆಯನ್ನು ಕೂಡ ಮಾಡಬೇಕಾಗಿತ್ತು. ಆದರೆ ಅವನು ಹಾಗೆ ಮಾಡಲಿಲ್ಲ. ಏಕೆಂದು ಕೇಳಿದವರಿಗೆ ಹೀಗೆ ಹೇಳಿದನು, ''ಇಬ್ಬರು ಯಜಮಾನರನ್ನು

ಒಬ್ಬನೇ ಸೇವಕನು ಒಮ್ಮೆಲೇ ಸೇವೆ ಮಾಡಲು ಸಾಧ್ಯವಿಲ್ಲ. ಮದೀನಾ ಯಾತ್ರೆಗೆ ನಾನು ಪ್ರತ್ಯೇಕವಾಗಿ ಸಾಧನೆ, ತಪಸ್ಸು ಮಾಡಬೇಕು. ಅದನ್ನು ಮಾಡಿದ ಮೇಲೆ ನಾನು ಹಿಂತಿರುಗಿ ಬಂದು ಮದೀನಾ ಯಾತ್ರೆಯನ್ನು ಕೈಗೊಳ್ಳುತ್ತೇನೆ.''

ಅನಂತರ ಬಯಾಜಿದ್ ಮತ್ತೆ ಹನ್ನೆರಡು ವರ್ಷಗಳ ಕಾಲ ಕಠಿಣ ತಪಸ್ಸನ್ನು ಆಚರಿಸಿದನು. ಒಂದು ವರ್ಷ ಪೂರ್ತಿ ತನ್ನ ಹೃದಯದ ಭಾವನೆಗಳನ್ನು ಪರೀಕ್ಷಿಸಿಕೊಳ್ಳುತ್ತ ಪರಿಶುದ್ಧಪಡಿಸಿಕೊಂಡನು. ಆಮೇಲೆ ನೋಡಿದರೆ, ತನ್ನಲ್ಲಿ ಇನ್ನೂ ತಪಸ್ಸಿನ ಅಹಂಕಾರವು ನೆಲೆಸಿರುವುದನ್ನು ಕಂಡು ಸಂತಾಪ ಹೊಂದಿದನು. ಅದನ್ನು ನಿವಾರಣೆ ಮಾಡಿಕೊಳ್ಳಲು ಐದು ವರ್ಷಗಳ ಕಾಲ ಪರಿಶ್ರಮಪಟ್ಟನು. ಅದಕ್ಕಾಗಿ ಅತ್ಯಂತ ಜಾಗರೂಕತೆಯಿಂದ ತನ್ನ ಮನಸ್ಸನ್ನು ವಿಶ್ಲೇಷಣೆ ಮಾಡಿಕೊಳ್ಳುತ್ತಿದ್ದನು. ಅನಂತರವಷ್ಟೇ ಅವನು ಮುಗ್ಧ ಮಗುವಿನಂತೆ ಮುಕ್ತಸ್ವಭಾವದವನಾದನು; ವಿನಯ ಮೂರ್ತಿಯಾದನು. ತನ್ನ ಪ್ರಾರ್ಥನೆಗಳಲ್ಲಿ ಬಯಾಜಿದ್ ಸದಾ ಭಗವಂತನ ಜೊತೆಗೆ ಸಂಪೂರ್ಣ ಐಕ್ಯಭಾವವನ್ನು ಯಾಚಿಸುತ್ತಿದ್ದನು. ಅಹಂಕಾರದಿಂದ ಪೂರ್ಣ ಬಿಡುಗಡೆಯನ್ನೇ ಬೇಡಿಕೊಳ್ಳುತ್ತಿದ್ದನು: ''ಓ ಪ್ರಭುವೇ, ನನ್ನ ಅಹಂಕಾರ ಸಂಪೂರ್ಣ ಅಡಗುವಂತೆ ಮಾಡು. ಓ ಭಗವಾನ್, ನಾನು ಎಲ್ಲಿಯವರೆಗೆ ನಿನ್ನೊಡನೆ, ನಿನ್ನಲ್ಲಿ ಇರುತ್ತೇನೆಯೋ, ಅಲ್ಲಿಯವರೆಗೆ ನಾನು ಸುರಕ್ಷಿತನಾಗಿರುತ್ತೇನೆ; ಉನ್ನತ ಭಾವದಲ್ಲಿ ನೆಲೆ ನಿಂತಿರುತ್ತೇನೆ. ಎಂದು ನಾನು ಈ ದೇಹಭಾವದಲ್ಲಿ ಇರುತ್ತೇನೆಯೋ, ಅಹಂಕಾರದೊಡನೆ ತಾದಾತ್ಮ್ಯ ಹೊಂದಿರುತ್ತೇನೆಯೋ, ಆಗ ಕೀಳು ಮನುಷ್ಯರಲ್ಲಿ ಕೀಳಾಗಿಬಿಡುತ್ತೇನೆ.''

## ವ್ಯಕ್ತಿತ್ವದ ಪ್ರಖರತೆ

ಬಯಾಜಿದನ ವ್ಯಕ್ತಿತ್ವದ ಪ್ರಖರತೆ ಕೆಲವು ಘಟನೆಗಳ ಮೂಲಕ ನಮಗೆ ತಿಳಿದುಬರುತ್ತದೆ: ಅವನು ಎಲ್ಲ ಸಂಗತಿಗಳನ್ನೂ ತನ್ನದೇ ಆದ ರೀತಿಯಲ್ಲಿ ನವೀನ ಶೈಲಿಯಲ್ಲಿ ಮಾಡುತ್ತಿದ್ದನು. ಒಮ್ಮೆ ಮಸೀದಿಗೆ ಹೋಗುತ್ತಿದ್ದಾಗ, ದಾರಿಯಲ್ಲಿ ಅವನು ಯುವಕನೊಬ್ಬನನ್ನು ಭೇಟಿಯಾದನು. ಅವನಿಗೆ ನೀತಿಮಾರ್ಗದಲ್ಲಿ ನಡೆಯುವಂತೆ ಉಪದೇಶ ಮಾಡಿದನು. ಅಷ್ಟಕ್ಕೇ ಆ ಯುವಕನಿಗೆ ಕೋಪ ಬಂತು. ಅವನು ಕೊಂಡೊಯ್ಯುತ್ತಿದ್ದ ಸಂಗೀತವಾದ್ಯದಿಂದಲೇ ಬಯಾಜಿದನ ತಲೆಗೆ ಹೊಡೆದನು. ಅವನ ತಲೆ ರಕ್ತಸಿಕ್ತವಾಯಿತು; ದೊಡ್ಡ ಗಾಯವೇ ಆಯಿತು. ವಾದ್ಯ ನುಚ್ಚುನೂರಾಯಿತು. ಇಷ್ಟಾದರೂ ಬಯಾಜಿದ್ ಪ್ರಕ್ಷುಬ್ಧಗೊಳ್ಳಲಿಲ್ಲ, ಮನೆಗೆ ಹೋದವನು, ಆ ವಾದ್ಯದ ಬೆಲೆಯಷ್ಟು ಹಣವನ್ನು ಆ ಯುವಕನಿಗೆ ಕಳಿಸಿಕೊಟ್ಟನು. ಇದಲ್ಲದೆ, ಒಂದು ಮಡಕೆ ಪೂರ್ತಿ ಸಿಹಿತಿಂಡಿಯನ್ನು ರವಾನಿಸಿದನು. ಇದನ್ನು ತೆಗೆದುಕೊಳ್ಳಲೇಬೇಕೆಂದು ಒತ್ತಾಯಿಸಿದನು. ಸಂತನ ಈ ಅಪೂರ್ವ ನಡವಳಿಕೆ, ಆ ಯುವಕನ ಬಾಳಿನಲ್ಲಿ ಮಹತ್ತರವಾದ ಪರಿವರ್ತನೆಯನ್ನು ಉಂಟುಮಾಡಿತು.

ಒಮ್ಮೆ ಒಬ್ಬ ಸಾಧಕ ಬಯಾಜಿದ್ ಹತ್ತಿರ ಬಂದನು. ''ಮಹಾಶಯರೇ, ಕಳೆದ ಮೂವತ್ತು ವರ್ಷಗಳಿಂದ ನಾನು ಪ್ರತಿ ರಾತ್ರಿಯೂ ಬಹಳ ಕಾಲವನ್ನು ಪ್ರಾರ್ಥನೆಯಲ್ಲಿ ಕಳೆಯುತ್ತಿದ್ದೇನೆ. ಉಪವಾಸ ವ್ರತವನ್ನೂ ಕೈಗೊಂಡಿದ್ದೇನೆ. ಇಷ್ಟಾದರೂ ನನಗೆ ಭಗವಂತನದ ದರ್ಶನದ ಮಿಂಚುನೋಟವೂ ಆಗಲಿಲ್ಲ. ಆದರೆ ನಿಮ್ಮನ್ನು ನೋಡಿದರೆ, ಭಗವಂತನ ಸೂರ್ಯರಶ್ಮಿಯಲ್ಲಿ ಬೆಳಗುತ್ತಿರುವಂತೆ ಕಾಣುತ್ತಿದ್ದೀರಿ'' ಎಂದನು. ಅದಕ್ಕೆ ಬಯಾಜಿದ್ ಕೊಟ್ಟ ಉತ್ತರ ಮಾರ್ಮಿಕವಾಗಿತ್ತು. ''ಅಯ್ಯಾ, ನಾನು ಒಂದು ಉಪಾಯವನ್ನು ಹೇಳಿಕೊಡುತ್ತೇನೆ. ಅದರಂತೆ ನೀನು ಮಾಡಿದರೆ ನೀನೂ ಭಗವಂತನ ದರ್ಶನವನ್ನು ಪಡೆದುಕೊಳ್ಳಬಹುದು. ಮೊಟ್ಟಮೊದಲನೆಯದಾಗಿ ನಿನ್ನೆಲ್ಲ ಧನಕನಕಗಳನ್ನು ಬಿಸಾಡಿಬಿಡು. ಒಂದು ಮಡಕೆ ಪೂರ್ತಿ ಸಿಹಿತಿಂಡಿಗಳನ್ನು ಇಟ್ಟುಕೊಂಡು, ರಸ್ತೆಬದಿಯಲ್ಲಿ ಕುಳಿತುಕೋ. ಕೆಲವು ದಾರಿಹೋಕ ಬಾಲಕರು ನಿನಗೆ ಚಪ್ಪಲಿಯಿಂದ ಹೊಡೆಯಬಹುದು; ನಿನ್ನನ್ನು ಅವಾಚ್ಯ ಶಬ್ದಗಳಿಂದ ನಿಂದಿಸಬಹುದು. ಅವರಲ್ಲಿ ಯಾರು ಹೆಚ್ಚು ಹೆಚ್ಚು ಹೊಡೆಯುತ್ತಾರೋ, ಹೆಚ್ಚು ಹೆಚ್ಚು ನಿಂದಿಸುತ್ತಾರೋ, ಅವರಿಗೆ ನಿನ್ನ ಪಾತ್ರೆಯಲ್ಲಿರುವ ಸಿಹಿತಿಂಡಿಗಳನ್ನು ಪ್ರೀತಿಪೂರ್ವಕವಾಗಿ ಕೊಡು. ಈ ಊರಿನ ಎಲ್ಲ ಕಡೆ ಇದೇ ರೀತಿ ಮಾಡುತ್ತ ಹೋಗು. ಇದಲ್ಲದೆ, ಎಲ್ಲಿ ನಿನ್ನನ್ನು ಜನರು ಬಹಳ ಕೀಳಾಗಿ ಕಾಣುತ್ತಾರೆಯೋ, ಅಂಥ ಸ್ಥಳದಲ್ಲಿ ವಾಸಮಾಡು.'' ಬಂದಿದ್ದವನು ಈ ಸಾಧನೆಯನ್ನು ಮಾಡಲು ಒಪ್ಪದೆ ಹೊರಟುಹೋದನು. ಈ ಬಗೆಯ ಅನೇಕ ಘಟನೆಗಳನ್ನು ಬಯಾಜಿದನ ಜೀವನದಲ್ಲಿ ನಾವು ಕಾಣುತ್ತೇವೆ.

## ಬಯಾಜಿದನ ಉಪದೇಶಾಮೃತ

ಬಯಾಜಿದನ ಉಪದೇಶಗಳು ಬಹಳ ಪ್ರಸಿದ್ಧವಾದುವು. ಅವನ ಪ್ರವಚನಗಳು ಬಹಳ ಸ್ಫೂರ್ತಿಯುತವಾದುವು ಮತ್ತು ಉತ್ತೇಜಕವಾದುವು. ಮಾನವನು ಭಗವಂತನೊಡನೆ ಏಕೀಭಾವವನ್ನು ಹೊಂದಬೇಕು ಎನ್ನುವುದೇ ಅವನ ಸಂದೇಶದ ತಿರುಳಾಗಿತ್ತು. ಬಯಾಜಿದ್ ಈ ರೀತಿಯಲ್ಲಿ ಪ್ರವಚನ ನೀಡುತ್ತಿದ್ದನು:

''ನಾನು ಹದಿನಾರು ವರ್ಷಗಳ ಕಾಲ ಭಗವಂತನ ಬಾಗಿಲ ಹೊಸ್ತಿಲಲ್ಲಿ ನಿಂತು ಕಾಯುತ್ತಿದ್ದೆನು; ನನಗೆ ಒಳಗೆ ಪ್ರವೇಶ ಮಾಡಲು ಆಗಿರಲಿಲ್ಲ. ಕಡೆಗೆ ಒಂದು ದಿನ ನಾನು ಭಗವಂತನಿಗೆ ಹೇಳಿದೆ, 'ಓ ದೇವರೇ, ನಾನು ನಿನಗೆ ಸೇರಿದವನು. ನಾನು ನಿನ್ನವನಾದಾಗ ಮಾತ್ರವೇ ನಾನು ಎಲ್ಲವನ್ನೂ ಪಡೆದುಕೊಳ್ಳುತ್ತೇನೆ. ಇಲ್ಲವಾದರೆ ನಾನು ಬರಿಯ ಶೂನ್ಯ.' ಆ ಕ್ಷಣದಿಂದಲೇ, ಅವನ ಕೃಪೆಯಿಂದ, ನನ್ನ ಎಲ್ಲ ಆಂತರಿಕ ಸಂಘರ್ಷಗಳು ಸಮಾಪ್ತವಾದುವು. ಅನಂತರ ನಾನು ಹೊಸ ಬಾಳನ್ನು ಪಡೆದುಕೊಂಡೆ. ನೂತನ ಪ್ರತ್ಯಕ್ಷ ಅನುಭವಗಳು ನನ್ನದಾದವು. ಭಗವಂತನ ಆಜ್ಞೆಯನ್ನು ಶಿರಸಾ ಪರಿಪಾಲಿಸಿದವರು ಮಾತ್ರವೇ, ತಾವು ಇಚ್ಛಿಸಿದ್ದನ್ನೆಲ್ಲ ಪಡೆದುಕೊಳ್ಳುತ್ತಾರೆ. ಆದರೆ ಭಗವಂತನನ್ನು

ಬಿಟ್ಟು ಬೇರೆ ಏನನ್ನೂ ನಾನು ಯಾಚಿಸುವುದಿಲ್ಲ. ಮೊದಮೊದಲು ನಾನು ಭಾವಿಸಿದ್ದೆ, 'ನಾನು ಭಗವಂತನನ್ನು ಪ್ರೀತಿಸುತ್ತಿದ್ದೇನೆ' ಎಂದು. ಆದರೆ ಯಾವಾಗ ನನ್ನ ಅಂತರ್ದೃಷ್ಟಿಯು ಅನಾವರಣ ಗೊಂಡಿತೋ, ಆಗ ನನಗೆ ತಿಳಿದು ಬಂತು, ಮೊದಲಿಗೆ ಪ್ರೀತಿಸಿದವನು, ನಾನಲ್ಲ ; ಭಗವಂತನೇ ಎಂಬುದಾಗಿ. ಭಗವಂತನೇ ನನ್ನನ್ನು ಅವನ ಬಳಿಗೆ ಸೆಳೆದುಕೊಂಡಿದ್ದಾನೆ ಎನ್ನವುದನ್ನು ನಾನು ಆಗ ಅರಿತುಕೊಂಡೆನು. ಇದರಿಂದಾಗಿಯೇ ಭಗವಂತನನ್ನು ಪ್ರೀತಿಸಲು ಸಾಧ್ಯವಾಯಿತೆಂದು ನನಗೆ ಮನವರಿಕೆಯಾಯಿತು.

''ಬಳಿಕ ನಾನು ಭಗವಂತನೆಡೆಗೆ ನನ್ನ ದೃಷ್ಟಿಯನ್ನು ಹರಿಸಿದೆ. ಅವನು ನನ್ನನ್ನು ಪ್ರಾಪಂಚಿಕ ಸಂಗತಿಗಳಿಂದ ದೂರದ ಉನ್ನತ ಸ್ಥಿತಿಗೆ ಕರೆದುಕೊಂಡುಹೋದನು. ಅವನ ದಿವ್ಯಜ್ಯೋತಿಯಿಂದ ನನ್ನನ್ನು ಒಬ್ಬ ಜ್ಯೋತಿಪುರುಷನನ್ನಾಗಿ ಮಾಡಿದನು. ಅತ್ಯಂತ ಗಹನವಾದ ರಹಸ್ಯಗಳನ್ನು ನನಗೆ ತೋರಿಸಿಕೊಟ್ಟು, ಅವನ ಹಿರಿಮೆ ಮತ್ತು ಅಪಾರ ಶಕ್ತಿಗಳ ಬಗ್ಗೆ ತಿಳಿಸಿಕೊಟ್ಟನು. ಅನಂತರ, ಭಗವಂತನಿಂದ ನನ್ನ ದೃಷ್ಟಿಯನ್ನು ನನ್ನೊಳಗೇ ನಾನು ಹರಿಸಿಕೊಂಡೆನು. ನಾನು ಎಷ್ಟು ಕೀಳುಮಟ್ಟದವನು, ಭಗವಂತನು ಎಂಥ ಉನ್ನತ ಮಟ್ಟದಲ್ಲಿದ್ದಾನೆ ಎನ್ನುವುದರ ಅರಿವು ನನಗೆ ಆಗ ಉಂಟಾಯಿತು. ಭಗವಂತನು ಪವಿತ್ರತೆಯ ಪ್ರತಿರೂಪ; ನಾನೋ ಅಪವಿತ್ರತೆಯೇ ಮೈವೆತ್ತವನು. ಆದರೆ ನಾನು ಅಲ್ಲಿಗೇ ನನ್ನ ಸಾಧನೆಯನ್ನು ನಿಲ್ಲಿಸಲಿಲ್ಲ. ನನ್ನ ದೃಷ್ಟಿಯನ್ನು ಇನ್ನೂ ಒಳಹರಿಸಿಕೊಂಡೆ. ನನ್ನ ವ್ಯಕ್ತಿತ್ವದ ಜ್ಯೋತಿಯೆಂಬುದು ಭಗವಂತನ ಜ್ಯೋತಿಯಲ್ಲದೆ ಬೇರೆಯಲ್ಲ ಎನ್ನುವುದನ್ನು ನಾನು ಆಗ ಅರಿತುಕೊಂಡೆ. ದೀರ್ಘವಾದ ಧ್ಯಾನದಿಂದ ನನಗೆ ವೇದ್ಯವಾಯಿತು, 'ಎಲ್ಲ ಬಗೆಯ ಆರಾಧನೆ ಮತ್ತು ಭಕ್ತಿಗಳನ್ನು ಮಾಡಿಸುವವನು ಭಗವಂತನೇ, ನಾನಲ್ಲ' ಎಂದು. 'ಪ್ರಾರ್ಥನೆಯನ್ನು ಮಾಡುವವನು ನಾನು, ಆರಾಧನೆಯನ್ನು ಮಾಡುವವನು ನಾನು' ಎಂಬ ನನ್ನ ಅಹಂಕಾರದ ಭಾವನೆಯು ಒಡನೆಯೇ ನಾಶವಾಗಿ ಹೋಯಿತು. ಅಚ್ಚರಿ ಮತ್ತು ಅದ್ಭುತ ನನ್ನ ಮನಸ್ಸನ್ನು ಸೂರೆಗೊಂಡಿತು.

''ಈ ಸ್ಥಿತಿಯಲ್ಲಿ ನಾನು ದೇವರಿಗೆ ಹೀಗೆ ಹೇಳಿದೆ, 'ಓ ನನ್ನ ಪ್ರಭುವೇ, ನೀನು ನನಗೆ ಉಂಟುಮಾಡಿರುವ ಈ ಸ್ಥಿತಿ ಅದೆಂಥದ್ದು?!' ಎಂದು. ಅದಕ್ಕೆ ಭಗವಂತನು ಉತ್ತರಿಸಿದನು, 'ನಾನೇ ಎಲ್ಲವೂ ಆಗಿದ್ದೇನೆ. ನನ್ನನ್ನು ಬಿಟ್ಟು ಈ ಜಗತ್ತಿನಲ್ಲಿ ಯಾವುದೂ ಇಲ್ಲ. ನಿನಗೆ ಕಾರ್ಯವನ್ನು ಮಾಡುವ ಅಧಿಕಾರ ಮಾತ್ರವಿದೆ. ಆದರೆ ಆ ಕಾರ್ಯಶಕ್ತಿಯಾಗಲಿ, ಕಾರ್ಯಕ್ಕೆ ಸಲ್ಲುವ ಫಲವಾಗಲಿ – ಅದು ನನಗೆ ಸೇರಿದ್ದು. ನಾನು ನಿನ್ನ ನೆರವಿಗೆ ಬರದಿದ್ದರೆ, ನಿನಗೆ ನನ್ನನ್ನು ಆರಾಧಿಸಲು ಕೂಡ ಆಗುವುದಿಲ್ಲ.'

''ಇದಾದನಂತರ, ಎಲ್ಲ ಕಡೆಯೂ ತನ್ನ ಸ್ವರೂಪವನ್ನೇ ಕಾಣಲು ಭಗವಂತನು ನನಗೆ ಆದೇಶವಿತ್ತನು. ಎಲ್ಲ ಕಾರ್ಯವನ್ನೂ ಅವನದೇ ಕಾರ್ಯವನ್ನಾಗಿ ನೋಡುವಂತೆ ಆಜ್ಞೆಯಿತ್ತನು. ನನ್ನ ಅಹಂಕಾರವನ್ನು ಭಗವಂತನು ಸಂಪೂರ್ಣವಾಗಿ ನಿರ್ಮೂಲನ ಮಾಡಿದನು. ಅವನ ಆನಂದಮಯ ಅಸ್ತಿತ್ವವು ನನ್ನದಾಗುವಂತೆ ಕರುಣಿಸಿದನು. ಹೀಗೆ ಭಗವಂತನು ಅಸತ್ತಿನಿಂತ ಸತ್ಯದೆಡೆಗೆ, ತಮಸ್ಸಿನಿಂದ ಜ್ಯೋತಿಯೆಡೆಗೆ, ಮೃತ್ಯುವಿನಿಂದ ಅಮೃತತ್ವದೆಡೆಗೆ ನನ್ನನ್ನು ಕರೆದುಕೊಂಡು ಹೋದನು. ನಾನು ಭಗವಂತನನ್ನೇ ನನ್ನ ಮನೆಯನ್ನಾಗಿ ಮಾಡಿಕೊಂಡೆನು. ಆ ಮೂಲಕ ಅನಂತ ಆನಂದವನ್ನು ಅನುಭವಿಸಿದೆನು. ನನ್ನ ಮಾತನ್ನು ನಿಲ್ಲಿಸಿಬಿಟ್ಟೆನು. ಬೇರೇನನ್ನು ಕೂಡ ಕೇಳುವುದನ್ನು ಕೊನೆಗೊಳಿಸಿದೆನು. ಇಂದ್ರಿಯಗಳ ಬಾಹ್ಯ ಚಟುವಟಿಕೆಗಳಿಗೆ ಕಡಿವಾಣ ಹಾಕಿಬಿಟ್ಟೆನು. ಭಗವಂತನ ಕೃಪೆಯು ನಿರಂತರ ಪ್ರವಾಹರೂಪದಲ್ಲಿ ನನ್ನ ಮೇಲೆ ಹರಿದುಬಂತು. ನವೀನ ಜ್ಯೋತಿಯ ಬೆಳಕಿನಲ್ಲಿ ನನ್ನ ಹೃದಯವು ಬೆಳಗಿ ಪ್ರಜ್ವಲಿಸಿತು. ನಾನು ದಿವ್ಯಜ್ಞಾನವನ್ನು ಪಡೆದುಕೊಂಡೆನು.

''ಭಗವಂತನು ನನಗೆ ಹೇಳಿದನು, 'ಬಯಾಜಿದ್, ಈ ರಹಸ್ಯವನ್ನು ತಿಳಿದುಕೋ, ಎಲ್ಲಿ ಏನೂ ಇಲ್ಲವೋ, ಅಲ್ಲಿ ಎಲ್ಲವೂ ಇದೆ.' ಇದಕ್ಕೆ ನಾನು ಉತ್ತರಿಸಿದೆ, 'ಓ ನನ್ನ ಪ್ರಭುವೇ, ನನಗೆ ಅಹಂಕಾರ ಬರದಂತೆ ನನ್ನನ್ನು ಕಾಪಾಡು. ನಾನೀಗ ಹೊಸ ಜೀವನವನ್ನು ಪಡೆದುಕೊಂಡಿದ್ದೇನೆ. ಅದನ್ನು ಶತಾಯಗತಾಯ ಕಾಪಾಡಿಕೊಳ್ಳಲು ನಾನು ಕಟಿಬದ್ಧನಾಗಿದ್ದೇನೆ. ನಿನ್ನ ವಿನಾ ಜೀವಿಸುವುದಕ್ಕಿಂತ, ನಾನೇ ಇಲ್ಲದಾಗುವುದೇ ಒಳ್ಳೆಯದೆಂದು ನನಗೀಗ ತೋರುತ್ತಿದೆ.' ಇದಕ್ಕೆ ಭಗವಂತನು ಹೇಳಿದನು, 'ಬಯಾಜಿದ್, ನಿನ್ನ ಧ್ಯಾನವನ್ನು ಮುಂದುವರೆಸಿಕೊಂಡು ಹೋಗು. ಕಡೆಯಲ್ಲಿ ನೀನು ಯಶಸ್ಸನ್ನು ಕಾಣುವೆ.' ಇದಕ್ಕೆ ನಾನು ಹೇಳಿದೆ, 'ಪ್ರಭೂ ನಿನ್ನಲ್ಲಿ ನನಗೆ ಪರಿಪೂರ್ಣ ವಿಶ್ವಾಸವಿದೆ. ನೀನು ನನ್ನನ್ನು ನಿನ್ನ ಸೇವಕನನ್ನಾಗಿ ಮಾಡಿಕೊಂಡಿದ್ದೀಯೆಂಬ ದೃಢ ನಂಬಿಕೆ ನನ್ನದು. ಇಂಥ ಸ್ಥಿತಿಯಲ್ಲಿ ಮಾತ್ರವೇ ನಾನು ನಿನ್ನ ಧ್ಯಾನ ಮಾಡಬಲ್ಲೆ. ನನ್ನ ಸ್ವಂತ ಸಾಮರ್ಥ್ಯದಿಂದ ಏನು ಮಾಡಲೂ ನನಗೆ ಸಾಧ್ಯವಾಗದು.

ಅನಂತರ ಭಗವಂತನು ನುಡಿದನು, 'ಬಯಾಜಿದ್ ನಿನಗೇನು ಬೇಕು, ಕೇಳಿಕೋ.' ನಾನು ಹೇಳಿದೆ, 'ಓ ಪ್ರಭುವೇ, ನಾನು ನಿನ್ನನ್ನು ಪ್ರೀತಿಸುತ್ತೇನೆ. ನಾನು ಇನ್ನು ಯಾವುದನ್ನೂ ಪ್ರೀತಿಸುವುದಿಲ್ಲ. ನೀನು ಪರಮ ಕರುಣಾಳುವಾಗಿದ್ದೀಯೆ. ನಿನ್ನಲ್ಲಿ ಮಾತ್ರ ನಾನು ಶಾಂತಿಯನ್ನು ಹೊಂದುತ್ತೇನೆ ಹೊರತು, ಬೇರೆ ಯಾವುದರಲ್ಲೂ ಅಲ್ಲ. ಆದ್ದರಿಂದ, ಒಂದು ಕ್ಷಣ ಕೂಡ ನನ್ನನ್ನು ನಿನ್ನಿಂದ ಬೇರ್ಪಡಿಸದಿರು. ನಿನ್ನನ್ನು ಬಿಟ್ಟು ಬೇರೆ ಏನನ್ನೂ ನನ್ನ ಎದುರಿಗೆ ಪ್ರದರ್ಶಿಸದಿರು.' ಅದಕ್ಕೆ ಭಗವಂತನು 'ಹಾಗೆಯೇ ಆಗಲಿ' ಎಂದನು. ಅದಾದ ಮೇಲೆ ಭಗವಂತನು ಸುದೀರ್ಘಕಾಲ ಮೌನವಾಗಿಯೇ ಇದ್ದನು. ಮತ್ತೆ ಹೇಳಿದನು, 'ನೀನು ಕಂಡದ್ದು ಸತ್ಯ, ನೀನು ಕೇಳಿದ್ದು ಸತ್ಯ. ಅದನ್ನೇ ಈಗ ನೀನು ನುಡಿದಿದ್ದೀಯೆ.' ಅದಕ್ಕೆ ನಾನು ಹೇಳಿದೆ, 'ನಾನು ಯಾವುದನ್ನು ಅನುಭವಿಸಿದೆನೋ, ಅದು ನಿನ್ನ ಅನುಗ್ರಹದಿಂದಲೇ. ನಾನು ನೋಡಿದ್ದೂ ಕೂಡ ನಿನ್ನ ಇಚ್ಛೆಯಿಂದಲೇ.

ನಾನು ಕೇಳಿಸಿಕೊಂಡಿದ್ದೂ ನಿನ್ನ ಕೃಪೆಯಿಂದಲೇ. ಈಗ ನಾನು ನಿನ್ನ ಸ್ತುತಿ ಮಾಡುತ್ತಿರುವುದೂ ಕೂಡ ನಿನ್ನ ಕರುಣೆಯಿಂದಲೇ.'

''ಇಷ್ಟಾದರೂ ಭಗವಂತನು ಮತ್ತೆ ಮತ್ತೆ ನನ್ನನ್ನು ಪರೀಕ್ಷೆಗೆ ಒಳಪಡಿಸಿದನು. ಅದೆಲ್ಲದರಲ್ಲಿ ನಾನು ಜಯಶಾಲಿಯಾದೆನು. ಅದಕ್ಕಿಂತ ಹೆಚ್ಚಿನ ಪರೀಕ್ಷೆಗಳನ್ನು ಎದುರಿಸಲು ಸಿದ್ಧನಾದೆನು. ನನ್ನ ಭಕ್ತಿಯ ದೀಪವು ನನ್ನ ಹೃದಯವನ್ನು ಬೆಳಗಿತು. ಅಲ್ಲಿ ಪ್ರಾರ್ಥನೆಗಿಂತಲೂ ಭಗವಂತನನ್ನು ಸೇರುವ ಉತ್ತಮ ಮಾರ್ಗವಿಲ್ಲವೆಂದು ನಾನು ಕಂಡುಕೊಂಡೆನು. ನೀರವ ಮೌನವೇ ಅಂಧಕಾರವನ್ನು ಕಳೆಯುವ ನಂದಾದೀಪವೆಂದು ಅರಿತುಕೊಂಡೆನು. ಈ ಮಾರ್ಗವನ್ನು ಕ್ರಮಿಸಿದ ನಾನು ಎಲ್ಲ ಬಾಹ್ಯ ಮತ್ತು ಆಂತರಿಕ ಮಾನವ ಸೀಮಿತತೆಗಳಿಂದ ಮುಕ್ತನಾದೆನು. ನನ್ನ ಅಂತರ್ದೃಷ್ಟಿಯು ತೆರೆಯಿತು; ಎಲ್ಲ ಬಗೆಯ ಕತ್ತಲು ನಾಶವಾಯಿತು. ನನ್ನ ಮಾತುಗಳಲ್ಲಿ ಮಹಾನ್ ಪರಿವರ್ತನೆ ಕಂಡುಬಂತು. ನನ್ನ ಉಕ್ತಿಗಳ ಮೂಲಕ ಭಗವಂತನೊಡನೆ ಐಕ್ಯತೆ, ಭಗವತ್ಕೃಪೆ ಮತ್ತು ಭಗವತ್ಪ್ರೇಮ – ಇವುಗಳನ್ನು ಬಿಟ್ಟು ಬೇರೆ ಏನನ್ನೂ ನನಗೆ ವ್ಯಕ್ತಪಡಿಸಲಾಗಲಿಲ್ಲ. ನನ್ನ ಕಣ್ಣುಗಳು ಭಗವಂತನ ಅವರ್ಣನೀಯ ಸೌಂದರ್ಯವನ್ನು ಬಿಟ್ಟು ಬೇರೆ ಏನನ್ನೂ ಕಾಣುತ್ತಿರಲಿಲ್ಲ. ನಾನು ಭಗವಂತನಲ್ಲಿಯೇ ಜೀವಿಸುತ್ತಿದ್ದೇನೆ; ಹೀಗಾಗಿ ನನಗೆ ಮರಣವೆಂಬುದೇ ಇಲ್ಲ.''

ಹೀಗೆ ಬಯಾಜಿದ್ ಸುದೀರ್ಘ ಉಪನ್ಯಾಸಗಳನ್ನು ನೀಡುತ್ತಿದ್ದನು. ಅವುಗಳಲ್ಲಿ ತನ್ನ ಸ್ವಂತ ಅನುಭವಗಳನ್ನೇ ಮಾರ್ಮಿಕ ಭಾಷೆಯಲ್ಲಿ ವ್ಯಕ್ತಪಡಿಸುತ್ತಿದ್ದನು.

## ಅಹಂ ಬ್ರಹ್ಮಾಸ್ಮಿ!

ಬಯಾಜಿದನನ್ನು ಅವನ ಶಿಷ್ಯರು ಮತ್ತು ಭಕ್ತರು ಬಹಳ ಗೌರವಿಸುತ್ತಿದ್ದರು. ಅವನ ಮಾತುಗಾರಿಕೆ, ಸ್ಫೂರ್ತಿಯುತವಾದ ಮತ್ತು ಪ್ರಾಮಾಣಿಕವಾದ ಅವನ ಉಪನ್ಯಾಸಗಳು ಮತ್ತು ಅವನು ತನ್ನ ಇಡೀ ಜೀವಮಾನದಲ್ಲಿ ನಡೆಸಿದ ಕಠಿಣ ತಪಸ್ಸನ್ನು ಕೊಂಡಾಡುತ್ತಿದ್ದರು. ಅವರೆಲ್ಲ ಅವನನ್ನು ಪ್ರೀತಿಸುತ್ತಿದ್ದರು, ಗೌರವಿಸುತ್ತಿದ್ದರು ಮಾತ್ರವಲ್ಲ, ಅವನಲ್ಲಿ ಪೂರ್ತಿ ವಿಶ್ವಾಸವನ್ನು ಇಟ್ಟುಕೊಂಡಿದ್ದರು. ಒಂದು ದಿನ ಬಯಾಜಿದ್ ಭಗವದುನ್ಮಾದದಲ್ಲಿ ಎದ್ದು ನಿಂತು, 'ನಾನೇ ದೇವರು' ಎಂದು ಉದ್ಘೋಷಿಸಿಕೊಂಡನು. ಇದನ್ನು ಕಂಡು ನೆರೆದಿದ್ದವರೆಲ್ಲ ಅಚ್ಚರಿಗೊಂಡರು. ಏಕೆಂದರೆ ಸಾಂಪ್ರದಾಯಿಕ ಇಸ್ಲಾಂ ಧರ್ಮದ ಪ್ರಕಾರ ಮನುಷ್ಯ ಎಂದೂ ದೇವರಾಗಲಾರನು.

''ಆಹಾ! ನಾನೇ ಪರಮಶಕ್ತನಾದ ಭಗವಂತ. ನನ್ನನ್ನು ಬಿಟ್ಟು ಬೇರೆ ಯಾವ ದೇವರೂ ಇಲ್ಲ. ನನ್ನನ್ನೇ ಆರಾಧಿಸಿರಿ.''

ಅವನ ಶಿಷ್ಯರೆಲ್ಲ ಏನು ಮಾಡುವುದು ಎಂದು ತಿಳಿಯದೆ ದಿಙ್ಮೂಢರಾದರು. ಅವನು ತನ್ನ ದಿವ್ಯಭಾವದಿಂದ ಕೆಳಕ್ಕೆ ಬಂದ ಮೇಲೆ ಇದರ ಬಗ್ಗೆ ವಿವರಣೆ ಕೊಡುವಂತೆ ಅವರೆಲ್ಲ ಬಯಾಜಿದನನ್ನು ಒತ್ತಾಯಿಸಿದರು. ''ಇನ್ನೊಮ್ಮೆ ನಾನೇನಾದರೂ ಅಂಥ ಮಾತುಗಳನ್ನು ಆಡಿದರೆ, ನನ್ನನ್ನು ಕೊಂದುಹಾಕಿಬಿಡಿ'' ಎಂದು ಬಯಾಜಿದ್ ತನ್ನ ಶಿಷ್ಯರಿಗೆ ಸೂಚನೆ ಕೊಟ್ಟನು. ಇಷ್ಟಾದರೂ ಈ ಬಗೆಯ ದಿವ್ಯಭಾವ ಅವನಲ್ಲಿ ಮರುಕಳಿಸುತ್ತಲೇ ಇತ್ತು. ಪ್ರತಿ ಸಮಯವೂ, ಮತ್ತಷ್ಟು ದೃಢತೆಯಿಂದ ಅವನು ತಾನೇ ದೇವರು ಎಂದು ಘೋಷಿಸುತ್ತಿದ್ದನು. ಮತ್ತೆ ಮತ್ತೆ ಈ ಬಗೆಯ ಸನ್ನಿವೇಶ ನಡೆಯುತ್ತಲೇ ಇತ್ತು. ಪ್ರತಿಸಲವೂ ಹಿಂದಿನದಿಕ್ಕಿಂತ ಆವೇಶದಿಂದ, ಪೂರ್ಣ ಶಕ್ತಿಯಿಂದ, ದೃಢನಂಬಿಕೆಯಿಂದ ಬಯಾಜಿದ್ 'ನಾನೇ ದೇವರು' ಎಂದು ಮುಕ್ತವಾಗಿ ಕೂಗಿ ಹೇಳುತ್ತಿದ್ದನು.

ಒಂದು ದಿನ ಒಬ್ಬ ಶಿಷ್ಯನು ಬಯಾಜಿದನ ಈ ಮಾತುಗಳಿಂದ ರೋಷಗೊಂಡನು. ಕತ್ತಿಯನ್ನು ಅವನತ್ತ ಬೀಸಿದನು. ಆದರೆ ಬಯಾಜಿದನೆಡೆಗೆ ಬೀಸಿದ ಆ ಕತ್ತಿಯು ಶಿಷ್ಯನ ದಿಕ್ಕಿಗೇ ಮರಳಿ ಬಂದು ಅವನನ್ನೇ ಕೊಂದಿತು. ಬಯಾಜಿದನು ಭಗವಂತನಲ್ಲಿ ಸಂಪೂರ್ಣವಾಗಿ ವಿಲೀನಗೊಂಡ ಮಹಾತ್ಮ. ಅವನ ಬಾಹ್ಯ ಶರೀರವೆಂಬುದು ಕನ್ನಡಿಯ ಹಾಗೆ, ಅದರಲ್ಲಿ ಜನರು ತಮ್ಮ ತಮ್ಮ ಪ್ರತಿಫಲನಗಳನ್ನೇ ಕಂಡುಕೊಳ್ಳಬಹುದು. ತನ್ನತ್ತ ಯಾವುದನ್ನು ಎಸೆದರೂ ಅದನ್ನು ಬಯಾಜಿದನ ದೇಹವು ಪ್ರತಿಫಲಿಸುತ್ತಿತ್ತು, ಅದು ಒಳ್ಳೆಯದಿರಲಿ, ಕೆಟ್ಟದಾಗಿರಲಿ. ಆದ್ದರಿಂದ ಅವನತ್ತ ಬೀಸಿದ ಕತ್ತಿ ಕೂಡ, ಹೊಡೆದವನ ಮೇಲೆಯೇ ಪ್ರತಿಫಲಿಸಿತು.

ಭಗವಂತನೊಡನೆ ತನ್ನ ಐಕ್ಯಭಾವನೆಯನ್ನು ಕುರಿತ ಅವನ ಹೇಳಿಕೆಗಳು ಬಹಳ ಪ್ರಸಿದ್ಧವಾಗಿವೆ. ಅವುಗಳಲ್ಲಿ ಎರಡು ಉಕ್ತಿಗಳು ಹೀಗಿವೆ:

ನಾನುಟ್ಟ ಬಟ್ಟೆಯೊಳಗೆ
ಭಗವಂತನಲ್ಲದೆ ಬೇರಾರೂ ಇಲ್ಲ
ಅವನನ್ನು ಸ್ವರ್ಗದಲ್ಲಿ ಹುಡುಕುವೆಯೊ
ಇಲ್ಲವೇ ಭುವಿಯಲ್ಲಿ ಅರಸುವೆಯೋ
ಅದರಿಂದ ನನಗೇನು!

ಆಹಾ! ಎಂಥ ಅದ್ಭುತ ಪುರುಷನು ನಾನು
ನಮನಗಳು ನನಗೆ
ನನ್ನ ವೈಭವಕ್ಕೆ ಎಲ್ಲೆಯೇ ಇಲ್ಲವಲ್ಲ!

ಬಯಾಜಿದ್ ಇನ್ನೂ ಅನೇಕ ಮಹತ್ತರ ಹಾಗೂ ಸಂಕೀರ್ಣ ಆಧ್ಯಾತ್ಮಿಕ ಸತ್ಯಗಳನ್ನು ಸಾಕ್ಷಾತ್ಕರಿಸಿಕೊಂಡನು. ಆ ಮೂಲಕ ಸೂಫೀ ಸಂಪ್ರದಾಯಕ್ಕೆ ಘನತೆಯನ್ನು ತಂದುಕೊಟ್ಟನು. ಬಯಾಜಿದ್ ಸೂಫೀತತ್ತ್ವಗಳನ್ನು ಭದ್ರವಾಗಿ ನೆಲೆಗೊಳಿಸಿದ ಮಹಾನ್ ಸಂತ. ಈ ತತ್ತ್ವಗಳಿಗಾಗಿ ಅನೇಕ ಮಹಾತ್ಮರು ತಮ್ಮ ಜೀವನವನ್ನೇ ಮುಂದಿನ ದಿನಗಳಲ್ಲಿ ಮುಡಿಪಾಗಿಟ್ಟರು. ಅವನೊಬ್ಬ ಮಹಾನ್ ಗುರು, ಚಿಂತಕ. ಎಲ್ಲಕ್ಕೂ ಮಿಗಿಲಾಗಿ ಮಹಾನ್ ದಾರ್ಶನಿಕ.

(ಆಧಾರ: ***Bayazid, A Great Sufi Saint,*** *by Aga Syed Ibrahim Dara,* Prabhuddha Bharata, November 1933)




# ಸೋದರಿ ನಿವೇದಿತಾ ಭಾಗ ೪

ಕಥೆ: ದೇವಪ್ರಸಾದ ಭಟ್ಟಾಚಾರ್ಯ ಅನುವಾದ: ಉಷಾ ಎಸ್. ಮೂರ್ತಿ ಚಿತ್ರ: ಸುನಿತಾ ವಾಸು


















ಭಾರತೀಯರು ಬಡತನ ಮತ್ತು ಅನಾರೋಗ್ಯದಿಂದ ಬಳಲುತ್ತಿದ್ದರು. ಭಾರತಕ್ಕೆ ಮತ್ತೆ ಮೇಲೇಳುವ ಶಕ್ತಿಯಿದೆ ಎಂದು ಸ್ವಾಮೀಜಿ ನಂಬಿದ್ದರು.






ಈ ಬಗ್ಗೆ ನಿವೇದಿತಾಳಿಗೆ ತರಬೇತಿ ನೀಡಲು ಸ್ವಾಮೀಜಿ ಆರಂಭಿಸಿದರು.



ಅವಳ ಸೇವಾಮನೋಭಾವನೆ ಹಾಗೂ ತ್ಯಾಗ, ಸ್ವಾಮೀಜಿಯವರ ಯೋಜನೆಗೆ ಅವಳನ್ನು ಸಮರ್ಪಕ ವ್ಯಕ್ತಿಯನ್ನಾಗಿ ಮಾಡಿತ್ತು.






ಸ್ವಾಮೀಜಿ ಅಲ್ಲಿ ತರಗತಿಗಳನ್ನು ತೆಗೆದುಕೊಳ್ಳುತ್ತಿದ್ದರು. ಆದರೆ ಅವರ ಅಭಿಪ್ರಾಯಗಳನ್ನು ನಿವೇದಿತಾ ಸುಲಭವಾಗಿ ಒಪ್ಪಿಕೊಳ್ಳುತ್ತಿರಲಿಲ್ಲ.



ಅದಕ್ಕೆ ಅವರು ಅವಳನ್ನು ತುಂಬಾ ಬಯ್ದರು.




ತಮ್ಮ ಅಭಿಪ್ರಾಯಗಳನ್ನು ಕುರಿತು ಬೇರೆಯವ
ರೊಂದಿಗೆ ರಾಜಿ ಮಾಡಿಕೊಳ್ಳುವ ವ್ಯಕ್ತಿ ಅವರಾಗಿರ
ಲಿಲ್ಲ. ಮೃದುವಾಗಿ ತಿಳಿಯಹೇಳುವ ವಿಧಾನವನ್ನು
ಅವರು ಅನುಸರಿಸುತ್ತಿರಲಿಲ್ಲ.


ಹೇಳಿದ್ದೆಲ್ಲವನ್ನೂ ವಿಧೇಯತೆ
ಯಿಂದ ಒಪ್ಪಿಕೊಳ್ಳುವ ಗುಣ
ನಿವೇದಿತಾಳಲ್ಲಿ ಇರಲಿಲ್ಲ.
ಹಾಗಾಗಿ ಅವರಿಬ್ಬರ ನಡುವೆ
ಭಿನ್ನಾಭಿಪ್ರಾಯ
ಉಂಟಾಗುತ್ತಿತ್ತು.


ಅವರ ಬೈಗುಳವನ್ನು ಸಹಿಸುವುದು ನಿವೇದಿತಾಳಿಗೆ ಕಷ್ಟವಾಗಬಹುದೆಂದು
ಶಿಷ್ಯೆಯೊಬ್ಬಳು ಸ್ವಾಮೀಜಿಗೆ ತಿಳಿಸಿದಳು. ಅದನ್ನು ಕೇಳಿದ ಸ್ವಾಮೀಜಿ ಸ್ವಲ್ಪ ಹೊತ್ತು
ಗಂಭೀರವಾಗಿ ಯೋಚಿಸಿದರು. ನಂತರ ಬಂದು ನಿವೇದಿತಾಳನ್ನು ಆಶೀರ್ವದಿಸಿದರು.


ಸ್ವಾಮೀಜಿಯ ಶಿಷ್ಯರಾದ ಸ್ವಾಮಿ ಸ್ವರೂಪಾನಂದರು ಬಂಗಾಳಿ ಭಾಷೆ
ಹಾಗೂ ಹಿಂದೂ ಶಾಸ್ತ್ರಗಳನ್ನು ಕುರಿತು ಅವಳಿಗೆ ಪಾಠಮಾಡಿದರು.


ಸ್ವಾಮೀಜಿಯ ವಿಚಾರಗಳನ್ನು ಅರ್ಥಮಾಡಿಕೊಳ್ಳುವುದು ಕಷ್ಟವಾದಾಗ
ಅವಳು ಅವುಗಳನ್ನು ಕುರಿತು ಸ್ವರೂಪಾನಂದರೊಂದಿಗೆ ಚರ್ಚಿಸುತ್ತಿದ್ದಳು.
ಆಗ ಅವಳಿಗೆ ಅರ್ಥವಾಗುವಂತೆ ಅವರು ವಿವರಿಸುತ್ತಿದ್ದರು.


ಅವರು ಅವಳಿಗೆ ಗೀತೆಯನ್ನು ಕುರಿತು ಪಾಠ ಮಾಡಿದರು. ಧ್ಯಾನ ಮಾಡುವುದನ್ನೂ
ಕಲಿಸಿಕೊಟ್ಟರು. ಧ್ಯಾನದ ಆಚರಣೆಯಿಂದ ಅವಳಿಗೆ ತುಂಬಾ ಸಹಾಯವಾಯಿತು.
ಸ್ವಾಮೀಜಿ ಏನನ್ನು ಹೇಳಬಯಸುತ್ತಿದ್ದಾರೆಂಬುದು ಅವಳಿಗೆ ಮನದಟ್ಟಾಯಿತು.


ಆಮೇಲೆ ಒಂದು ದಿನ ಸ್ವಾಮೀಜಿ ನಿವೇದಿತಾಳ ಕೆಲಸದ ಬಗ್ಗೆ ಮತ್ತು ತಾವು ಅವಳಲ್ಲಿಟ್ಟಿರುವ ವಿಶ್ವಾಸದ ಬಗ್ಗೆ ವಿವರಿಸಿದರು.


ನಿವೇದಿತಾ ತಾನು ಪ್ರಾರಂಭಿಸಲು ಉದ್ದೇಶಿಸಿರುವ ಶಾಲೆಯನ್ನು ಕುರಿತು ಅವರ ಸಲಹೆ ಕೇಳಿದಳು.


ಅವಳಿಗೆ ಕಾರ್ಯ ನಿರ್ವಹಿಸಲು ಪೂರ್ಣ ಸ್ವಾತಂತ್ರ್ಯ ನೀಡಿದ ಸ್ವಾಮೀಜಿ ಅವಳನ್ನು ಆಶೀರ್ವದಿಸಿದರು.


ನೀನು ನನ್ನೊಡನೆ ಅಮರನಾಥ ಯಾತ್ರೆಗೆ ಬಾ. ಅಲ್ಲಿ ನಿನ್ನನ್ನು ಶಿವನಿಗೆ ಅರ್ಪಿಸಿಬಿಡಬೇಕೆಂದಿದ್ದೇನೆ.


ನನಗೆ ಎರಡು ಪಟ್ಟು ಆಶೀರ್ವಾದ ಸಿಕ್ಕಿದಂತಾಯಿತು.


ತುಂಬಾ ದುರ್ಗಮವಾದ ಹಿಮದಿಂದ ಆವೃತವಾದ ದಾರಿಯಲ್ಲಿ ಮೈಲಿಗಟ್ಟಲೆ ನಡೆಯುತ್ತಾ ಅವರು ಅಮರನಾಥ ಗುಹೆಯನ್ನು ತಲುಪಿದರು.
ಮುಂದಿನ ಸಂಚಿಕೆಗೆ..




# ಮಂಗಳೂರಿನಲ್ಲಿ 'ಭಾವಸಂಗಮ - ಭಕ್ತಸಮಾಗಮ'

ನವಂಬರ್ ೪ ರಿಂದ ೬ರ ವರೆಗೆ ಮಂಗಳೂರು ರಾಮಕೃಷ್ಣ ಮಠದಲ್ಲಿ ನಡೆದ ಮೂರು ದಿನಗಳ **'ಭಾವಸಂಗಮ - ಭಕ್ತ ಸಮಾಗಮ'** ಆಧ್ಯಾತ್ಮಿಕ ಶಿಬಿರವು ವಾರ್ಷಿಕೋತ್ಸವದೊಂದಿಗೆ ಸಂಗಮಗೊಂಡು, ವಿಶಿಷ್ಟ ಕಾರ್ಯಕ್ರಮವಾಗಿ ರೂಪ ಪಡೆತು. ಶ್ರೀ ಆದಿಚುಂಚನಗಿರಿ ಮಹಾಸಂಸ್ಥಾನ ಮಠದ ಶ್ರೀ ನಿರ್ಮಲನಾಥಾನಂದ ಸ್ವಾಮೀಜಿಯವರು ಈ ಕಾರ್ಯಕ್ರಮವನ್ನು ಉದ್ಘಾಟಿಸಿ ಮಾತನಾಡಿದರು. ರಾಮಕೃಷ್ಣ ಮಹಾಸಂಘದ ಟ್ರಸ್ಟಿಗಳೂ, ಕೊಯಮತ್ತೂರು ರಾಮಕೃಷ್ಣ ಮಿಷನ್ ವಿದ್ಯಾಲಯದ ಅಧ್ಯಕ್ಷರೂ ಆದ ಸ್ವಾಮಿ ಅಭಿರಾಮಾನಂದಜಿ ಅಧ್ಯಕ್ಷತೆ ವಹಿಸಿದರು. ರಾಮಕೃಷ್ಣ ಮಹಾಸಂಘದ ಸ್ವಾಮಿ ನಿತ್ಯಸ್ಥಾನಂದಜಿ, ಅನುಪಮಾನಂದಜಿ, ಸ್ವಾತ್ಮಾರಾಮಾನಂದಜಿ, ತ್ಯಾಗೀಶ್ವರಾನಂದಜಿ, ಯುಕ್ತೇಶಾನಂದಜಿ ಹಾಗೂ ರಾಣೆಬೆನ್ನೂರು ರಾಮಕೃಷ್ಣ-ವಿವೇಕಾನಂದ ಆಶ್ರಮದ ಸ್ವಾಮಿ ಪ್ರಕಾಶಾನಂದಜಿಯವರು ಉದ್ಘಾಟನಾ ಸಮಾರಂಭದಲ್ಲಿ ಉಪಸ್ಥಿತರಿದ್ದರು. **ದಿವ್ಯತ್ರಯಧಾರೆ, ಅಧ್ಯಾತ್ಮಧಾರೆ, ಶಾಸ್ತ್ರ-ಕಾವ್ಯ ಧಾರೆ** ಎಂಬ ಮೂರು ಪರಿಕಲ್ಪನೆಗಳಿಂದ ಕೂಡಿದ ಒಟ್ಟು ಒಂಬತ್ತು ಗೋಷ್ಠಿಗಳಲ್ಲಿ ರಾಮಕೃಷ್ಣ ಮಹಾಸಂಘದ ಸಂನ್ಯಾಸಿಗಳು ಹಾಗೂ ನಾಡಿನ ಪ್ರಖ್ಯಾತ ಚಿಂತಕರು ಪ್ರವಚನ-ಭಾಷಣ ಮಾಡಿದರು. ಇದರೊಂದಿಗೆ ಪ್ರಶ್ನೋತ್ತರ, ಸಂವಾದ, ಭಜನೆ, ಸಂಕೀರ್ತನೆಗಳು ನಡೆದವು. ಮೊದಲ ದಿನ ಶ್ರೀ ದತ್ತಾತ್ರೇಯ ವೇಲಂಕರ್ ಅವರಿಂದ **ದಿವ್ಯತ್ರಯರ ಗಾನಾಮೃತ-ಭಕ್ತಿಸಂಗೀತ,** ಶ್ರೀ ದಾಮೋದರ್ ರಾಮದಾಸಿ, ಪುಣೆ ಅವರಿಂದ **'ಯೋಧ ಸಂನ್ಯಾಸಿ ಸ್ವಾಮಿ ವಿವೇಕಾನಂದ'** ಹಿಂದೀ ಏಕಪಾತ್ರಾಭಿನಯ, ಎರಡನೆಯ ದಿನ ಸ್ವಾಮಿ ಸ್ವಾತ್ಮಾರಾಮಾನಂದಜಿಯವರಿಂದ **ಉಷಾಕೀರ್ತನೆ,** ಸ್ವಾಮಿ ಸತ್ವಸ್ಥಾನಂದಜಿಯವರಿಂದ **ಭಗವನ್ನಾಮ ಸಂಕೀರ್ತನೆ,** ಉಸ್ತಾದ್ ಫಯಾಜ್ ಖಾನ್ ಅವರಿಂದ **ಭಜನ್ ಸಂಧ್ಯಾ** ನಡೆಯಿತು. ಸಮಾರೋಪ ಸಮಾರಂಭ ದಲ್ಲಿ ನಿಟ್ಟೆ ವಿಶ್ವವಿದ್ಯಾನಿಲಯದ ಕುಲಾಧಿ ಪತಿಗಳಾದ ಶ್ರೀ ವಿನಯ್ ಹೆಗ್ಡೆ ಹಾಗೂ ಕರ್ನಾಟಕ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಗಣೇಶ್ ಕಾರ್ಣಿಕ್ ಅವರು ಭಾಗವಹಿಸಿದ್ದರು.

ಕರ್ನಾಟಕದ ಎಲ್ಲೆಡೆಗಳಿಂದ ಬಂದಿದ್ದ ಸುಮಾರು ೧೦೦೦ ಮಂದಿ ಭಕ್ತರುಗಳು ಈ ಕಾರ್ಯಕ್ರಮದ ಪ್ರತಿನಿಧಿಯಾಗಿ ಭಾಗವಸಿದರು. ಎಲ್ಲ ಪ್ರತಿನಿಧಿಗಳು ಹಾಗೂ ಭಕ್ತರು ಗಳಿಗೆ ಊಟೋಪಚಾರದ ವ್ಯವಸ್ಥೆ ಮಾಡಲಾಗಿತ್ತು. ಸುಮಾರು ೬೦೦ ಮಂದಿ ಪ್ರತಿನಿಧಿಗಳಿಗೆ ವಸತಿ ಸೌಕರ್ಯವನ್ನು ಕೂಡ ಒದಗಿಸಿಕೊಡಲಾಗಿತ್ತು.







Managing Editor : Swami Atmajnananda Editor : Swami Jnanayogananda
Printed and Published by Swami Muktidananda, on behalf of Sri Ramakrishna Ashrama, Yadavagiri, Mysore and Printed at Mayur Graphics, No.C-12, Industrial Estate, Rajaji Nagar, Bangalore -560 010 and published at Sri Ramakrishna Ashrama, Yadavagiri, Mysore -570 020

# Pay Now Travel Later

## Discounted Group Tour Senior Special 2017

**Group Travel: Ex Bangalore***
**Special Offer price valid till 31 December 2016**
***All inclusive package**
**Hurry!!! Limited seats only!!!**

**Orchid**
**Travel & Tours**
**www.orchidtours.net**

## Cost Saver UK & Europe

**Places Covered:**

**U K : London**
**France : Paris**
**Netherlands : Amsterdam**
**Belgium : Brussels**
**Germany : Heidelberg**
**Switzerland : Lucerne, Mount titlies**
**Austria : Innsbruck**
**Liechtenstein : Vaduz**
**Italy : Venice, Pisa, Rome, Vatican**

**Package Cost: Rs. 1,99,900/-**

Tower Bridge


Mount Titlies


Austria


Eiffel Tower


## East coast & West coast

**Places Covered:**

**New York**
**Washington DC**
**Niagara Falls**
**Las Vegas**
**Los Angeles**
**San Francisco**

**Package Cost: Rs. 2,49,900/-**

Whitehouse


Golden Gate


Las Vegas



Niagara Falls


**For booking & more details, please contact:**

| | | |
|---|---|---|
| **Basavanagudi**<br># 98, 1st Floor, D.V.G Road,<br>Basavanagudi,<br>Bangalore - 560004.<br>Office: 080-26617178<br>Mob: **+91 9900080794** | **Malleshwaram**<br># 198, 1st Floor,Yathrirajmath<br>Building, Malleshwaram,<br>Bangalore - 560003.<br>Office: 080 - 41204155/23445559<br>Mob: **+91 9900080793** | **Langford Town**<br># 4,1st Floor, O Shaughnessy<br>Road, Langford Town,<br>Bangalore - 560025.<br>Office : 080 – 22221645<br>Mob: **+91 9900080799** |

*All inclusive: Visa / Accommodation / All Transfers / Entrance Fee / All Taxes / Services of Tour Manager.

VIVEKA PRABHA (KANNADA MONTHLY)
December 2016, Vol.17, No.12, No.of pages : 44

Registered With Registrar of News Papers Of India
under 72356/2000.postal Regn.No.KA/SK/MYS/480/
2015-17. LICENCED TO POST W.P.P.AT YADAVAGIRI
MYSORE 570 020, VIDE LICENCE NO.SK/WPP/MYS/155/2015-17

''ಒಂದು ಸಲ ಒಂದು ಹಡಗಿನ ಪಟಸ್ತಂಭದ ಮೇಲೆ ಒಂದು ಹಕ್ಕಿ ಕುಳಿತಿತ್ತು . ಹಡಗು ಯಾವಾಗ ಹೊರಟಿತೋ ಅದಕ್ಕೆ ಗೊತ್ತಾಗಲಿಲ್ಲ . ಯಾವಾಗ ಅದಕ್ಕೆ ಅನಂತ ಸಾಗರದ ಅರಿವಾಯಿತೋ, ಪಟಸ್ತಂಭವನ್ನು ಬಿಟ್ಟು ದಡವನ್ನು ಹುಡುಕಿಕೊಂಡು ಉತ್ತರದ ಕಡೆಗೆ ಹಾರಿತು. ಆದರೆ ಕೆರೆಯ ಚಿಹ್ನೆಯು ಇಲ್ಲದೆ ಹಿಂತಿರುಗಿ ಬಂತು. ಸ್ವಲ್ಪ ಕಾಲ ಸ್ತಂಭದ ಮೇಲಿದ್ದು ದಕ್ಷಿಣ ದಿಕ್ಕಿಗೆ ಹೋಯಿತು. ಅಲ್ಲಿಯೂ ಕೂಡ ಅಸೀಮವಾದ ಸಾಗರವೇ ಇತ್ತು . ಪುನಃ ಸುಸ್ತಾಗಿ ಸ್ತಂಭಕ್ಕೆ ಬಂತು. ಸ್ವಲ್ಪಕಾಲ ಅಲ್ಲಿದ್ದು ಪೂರ್ವ ಮತ್ತು ಪಶ್ಚಿಮ ದಿಕ್ಕುಗಳಿಗೆ ಹೋಯಿತು. ಎಲ್ಲಿಯೂ ದಡದ ಸುಳಿವೇ ಇಲ್ಲದೆ ಅದು ಪಟಸ್ತಂಭದ ಮೇಲೆ ಸುಮ್ಮನೆ ಕುಳಿತುಕೊಂಡಿತು.

''ಯಾವುದನ್ನು ಮನುಷ್ಯ ಅರಸಿಕೊಂಡು ಹೋಗುವನೋ ಅದು ಅವನ ಬಳಿಯೇ ಇದೆ. ಆದರೂ ಅವನು ಎಲ್ಲೆಲ್ಲೋ ಅಲೆಯುವನು. ದೇವರು ಅಲ್ಲಿರುವನು ಎಂದು ಭಾವಿಸಿದರೆ ಅವನು ಅಜ್ಞಾನಿ. ದೇವರು ಇಲ್ಲೇ ಇರುವನು ಎಂದು ಅರಿತರೆ ಅವನೇ ಜ್ಞಾನಿ.''

-ಶ್ರೀರಾಮಕೃಷ್ಣರು



ಶುಭಹಾರೈಕೆಗಳೊಂದಿಗೆ..  - ಶ್ರೀರಾಮಕೃಷ್ಣರ ಒಬ್ಬ ವಿನೀತ ಭಕ್ತ

Printed at mayur graphics,Bangalore